 Photo by P. V. Subramanyam



ಬಹುಮಾನ
ಪಡೆದ ಶೀರ್ಷಿಕೆ

ನೆಲದಲ್ಲಿಯೂ ನೆಲದಡಿಯಲ್ಲಿಯೂ
ನಾ ನಿ ದ್ದೇ ನೆ !

ಕಳಿಸಿದವರು :
ಪಿ. ನರಹರಿರಾವ್

**Statement about ownership of CHANDAMAMA (Kannada)**
**(Rule 8 Form IV), Newspapers (Central) Rules, 1956**

| | | |
|---|---|---|
| 1. *Place of Publication* | : | 'CHANDAMAMA BUILDINGS'<br>2 & 3, Arcot Road,<br>Vadapalani, Madras-26 |
| 2. *Periodicity of Publication* | : | MONTHLY<br>1st of each Calendar month |
| 3. *Printer's Name* | : | B. NAGI REDDI,<br>Managing Director,<br>The B. N. K. Press (Pvt.) Ltd. |
| *Nationality* | : | INDIAN |
| *Address* | : | 2 & 3, Arcot Road, Vadapalani,<br>Madras-26 |
| 4. *Publisher's Name* | : | B. NAGI REDDI,<br>Managing Proprietor<br>CHANDAMAMA PUBLICATIONS |
| *Nationality* | : | INDIAN |
| *Address* | : | 2 & 3, Arcot Road, Vadapalani,<br>Madras-26 |
| 5. *Editor's Name* | : | CHAKRAPANI (A. V. Subba Rao) |
| *Nationality* | : | INDIAN |
| *Address* | : | 2 & 3, Arcot Road, Vadapalani,<br>Madras-26 |
| 6. *Name & Address of individuals who own the paper* | : | B. NAGI REDDI,<br>Sole Proprietor |

I, B. Nagi Reddi, hereby declare that the particulars given above are true to the best of my knowledge and belief.

*1st March, 1958*

**B. NAGI REDDI,**
*Signature of the Publisher*

# ಚಂದಮಾಮ

ಏಪ್ರಿಲ್ '58

## ಈ ಸಂಚಿಕೆಯಲ್ಲಿ


| | | | |
|---|---|---|---|
| ಮುಖಚಿತ್ರ | ... 2 | ಅಲೀ ನೂರ್ | ... 36 |
| ವೈರಾಗ್ಯ | ... 3 | ಧೀರಾನಂದ | ... 45 |
| ನರಿಯಣ್ಣನ ನರಳಾಟ | ... 7 | ರೂಪಧರನ ಯಾತ್ರೆಗಳು | ... 49 |
| ಮೂವರು ಮಾಂತ್ರಿಕರು | ... 9 | ಅದ್ಭುತದೀಪ | ... 57 |
| ಕಾಲಸಂಕೇತ | ... 17 | ಘಾತುಕ ಮೃಗಗಳು | ... 68 |
| ಅಪೂರ್ವವಾದ ಕಾಣಿಕೆ | ... 18 | ವ್ಯಂಗಚಿತ್ರ | ... 70 |
| ಅರ್ಧಾಂಗಿ | ... 25 | ಅವಿವೇಕ | ... 71 |
| ಮಿತ್ರಲಾಭ | ... 33 | ಚಿತ್ರಕಥೆ | ... 72 |


ಅಲ್ಲದೆ ಫೋಟೋ ಶೀರ್ಷಿಕೆಯ ಸ್ಪರ್ಧೆ ಎಲ್ಲಾ ಇವೆ.


**ಚಂದಮಾಮ** (ಹೊರಡುವ ಎಲ್ಲಾ ಭಾಷೆಗಳಲ್ಲಿಯೂ)

**ಬಿಡಿ ಪ್ರತಿ 50 ನಯೇ ಪೈಸೇ ;    ವಾರ್ಷಿಕ ಚಂದಾ ರೂ. 6 - 00**


ವೀರ ಕಿಟ್ಟು ಮತ್ತು ಬಾಯಿಬಡುಕ ಪುಟ್ಟು


ಮುಂದೆ ಬಾರೋ ಕಿಟ್ಟು! ನನ್ಮುಂದೆ ನಿಂದೇನೂ ನಡೆಯೋದಿಲ್ಲ.


ಕಬಡ್ಡಿ...ಕಬಡ್ಡಿ... ಕಬಡ್ಡಿ...


ಹಿಡಿಯೋ ಅವರನ್ನು ಕಿಟ್ಟು, ಎಲ್ಲರನ್ನು! ಹೆದರೋದೇಕೆ? ಹಿಂ-ಜರಿಯ ಬೇಡ, ಮುಂದೆ ಹೋಗು!


ನೀನು ಯಾವಾಗ್ಲೂ ಬಹಳ ಬಡಾಯಿ ಕೊಚ್ಚುತ್ತಿ! ನೀನು ಸೋಲಿಸಿದ್ದು ಒಬ್ಬನನ್ನು ಮಾತ್ರ. ನಾನಾಗಿದ್ರೆ ಇಬ್ಬರನ್ನು ಅಥವಾ ಮೂವರನ್ನು ಕೈಯಿಂದ ಹಿಡಿಯುತ್ತಿದ್ದೆ. ಮತ್ತು ಮೂವರು ಅಥವಾ ನಾಲ್ಕುಮಂದಿಯನ್ನು ಕಾಲಿಂದ ಮುಟ್ಟುತ್ತಿದ್ದೆ.

DL. 32▲A-50 KN


ನಾನಾಗಿದ್ರೆ ಮೂಲಂಗಿಯನ್ನು ಕಿತ್ತೊಗೆವ ಹಾಗೆ ಒಬ್ಬೊಬ್ರನ್ನೆ ಎಸೆದು ಬಿಡುತ್ತಿದ್ದೆ.
ಶಾಭಾಸ್! ಬಾಯಿಬಡುಕರ ರಾಜ! ಬಡಾಯಿ ಕೊಚ್ಚೋದಕ್ಕೆ ನಿನಗೆ ಗೊತ್ತು!


ಒಳ್ಳೇದು! ಕಬಡ್ಡಿ ಹೇಗೆ ಆಡಬೇಕೆಂದು ನಿನಗೆ ಕಲಸುತ್ತೇನೆ.


ಎಲ್ಲರೂ ಹುಷಾರಾಗಿರಿ! ಟೊಳ್ಳು ಪಹಿಲ್ವಾನ್ ಬರ್‍ತಿದ್ದಾನೆ.


ಇದನ್ನು ನನ್ನ ಪಾಲಿಗೆ ಬಿಡಿರಿ! ಈ ನೊಣವನ್ನ ಒಂದು ಕ್ಷಣದಲ್ಲ ಮುಗಿಸಿ ಬಿಡ್ತೇನೆ!


ಆಟ ಮುಗಿದ ಮೇಲೆ.
ಪುಟ್ಟು, ನಿನಗೆ ಎಷ್ಟೋ ಸಲ ಹೇಳಿದ್ದೆ, ನೀನು ದಿನಾಲೂ ಹಾಲು ಕುಡಿದು 'ಡಾಲ್ಡ'ದಿಂದ ತಯಾರಿಸಿದ ಆಹಾರ ತಿಂದ್ರೆ ಮಾತ್ರ ಬಲಶಾಲಿಯಾಗುವಿ ಎಂದು!


ಡಾಲ್ಡ ವನಸ್ಪತಿಯಲ್ಲಿ ಗುಣಗಳು ಅನೇಕವಿವೆ. ಅದು ನಿಮಗೆ ಶಕ್ತಿಯನ್ನೂ ಸ್ಫೂರ್ತಿಯನ್ನೂ ಕೊಡುತ್ತದೆ. ನಿಮ್ಮ ಎಲ್ಲ ಅಡಿಗೆಯನ್ನು 'ಡಾಲ್ಡ'ದಿಂದ ತಯಾರಿಸಿರಿ. ಮತ್ತು ಹೆಚ್ಚು ಶಕ್ತಿಯನ್ನು ಪಡೆಯಿರಿ.



# ಮರುಭೂಮಿಯ ಹಡಗು

ಬಹುಶಃ ನೀವು ಸಮುದ್ರದಲ್ಲಿ ಸಂಚರಿಸುವ ಹಡಗುಗಳ ವಿಷಯವಾಗಿ ರೋಮಾಂಚಕಾರಿಯಾದ ಕಥೆಗಳನ್ನು ಓದಿರಬಹುದು. ಆದರೆ ಈ ಕಥೆ "ಮರುಭೂಮಿಯ ಹಡಗಿನ" ವಿಷಯವಾಗಿದೆ. "ಮರುಭೂಮಿಯ ಹಡಗು" ಹಡಗೇನೂ ಅಲ್ಲ. ಇದು ಏನೆಂಬುದನ್ನು ನೀವು ಊಹಿಸಬಲ್ಲಿರಾ?

ನೋಡಿ, ಪ್ರಪಂಚದಲ್ಲಿ ಅನೇಕ ಮರುಭೂಮಿಗಳಿವೆ. ಭಾರತದಲ್ಲಿಯೂ ಒಂದಿದೆ. ಮರುಭೂಮಿಯು ಒಂದು ಮರಳಿನ ಸಮುದ್ರ. ಅಲ್ಲಿ ರಸ್ತೆಗಳಿಲ್ಲ. ಎತ್ತಿನ ಗಾಡಿಗಳಾಗಲೀ ಮೋಟಾರ್ ವಾಹನಗಳಾಗಲೀ ಮರಳುದಿಣ್ಣೆಗಳನ್ನು ಹಾದು ಹೋಗಲಾರವು. ಹಗಲಿನಲ್ಲಂತೂ ಆ ಸ್ಥಳವು ಒಂದು ನರಕವೇಸರಿ. ಆದರೆ ಮರುಭೂಮಿಯೆಲ್ಲಾ ಮರಳಿನಿಂದಲೇ ತುಂಬಿಲ್ಲ ಏಕೆಂದರೆ, ಅಲ್ಲಲ್ಲಿ ಪೈರುಪಚ್ಚೆಗಳಿಂದ ಕೂಡಿದ ಹಚ್ಚನೆಯ "ಒಯಸಿಸ್" ಗಳಿವೆ. ಅಲ್ಲಿ ಜನರು ನೆಲೆಗೊಂಡು ಜೀವನ ನಡೆಸುತ್ತಾರೆ. ಇಂತಹ ಸ್ಥಳಗಳಲ್ಲಿ ಅಲ್ಲಿಂದ ಇಲ್ಲಿಗೆ ಹೋಗಿ ಬರಲು "ಮರುಭೂಮಿ ಹಡಗು" ಒಂದೇ ಸಾಧನ.

ಈಗ ನಮ್ಮ ರಾಜಸ್ಥಾನದ ಮರುಭೂಮಿಯಲ್ಲಿ ಜನರು ಇಂತಹ "ಒಯಸಿಸ್" ಪ್ರದೇಶದಲ್ಲಿ ನೆಲಸಿಕೊಂಡು ಜೀವನ ಸಾಗಿಸುತ್ತಾರೆ. ಈ ಜನರಿಗೆ ಚಹಾ—ಅದರಲ್ಲೂ ಬ್ರೂಕ್ ಬಾಂಡ್ ಚಹಾ—ಎಂದರೆ ಬಹಳ ಇಷ್ಟ. ಎಲ್ಲೆಡೆಯಲ್ಲಿಯೂ ಪ್ರತಿಯೊಬ್ಬರೂ ಬ್ರೂಕ್ ಬಾಂಡ್ ಚಹವನ್ನೇ ಅಪೇಕ್ಷಿಸುತ್ತಾರೆ ಎಂಬುದು ನಿಮಗೆ ತಿಳಿದೇ ಇದೆ. ಆದರೆ ಈ ಜನರಿಗೆ ಇದು ಒದಗುವುದಾದರೂ ಹೇಗೆ? "ಮರುಭೂಮಿಯ ಹಡಗು" ಅವರಿಗೆ ನೆರವಾಗುತ್ತದೆ. ಇದು ಒಂದು ಪ್ರಾಣಿ. ಈ ಪ್ರಾಣಿಯ ವೈಶಿಷ್ಟ್ಯವೇನೆಂದರೆ, ಇದು ಅನೇಕ ದಿನಗಳವರೆಗೆ ನೀರಿಲ್ಲದೇ ಇರಬಲ್ಲುದು, ಅಲ್ಲದೆ ನೀರಿನ ವಾಸನೆಯನ್ನು ಬಹಳ ದೂರದಿಂದಲೇ ಪತ್ತೆಹಚ್ಚುತ್ತದೆ. ಈ ಪ್ರಾಣಿಯೇ ಒಂಟೆ. ಇದು ಬಿಸಿಲಿನ ಜಳಪನ್ನೂ ಮರಳಿನ ಬಿರುಗಾಳಿಯನ್ನೂ ಎದುರಿಸಿ, ಜನರನ್ನೂ ಸಾಮಾನುಗಳನ್ನೂ ಕ್ಷೇಮವಾಗಿ ಮರಳು ಪ್ರದೇಶದಿಂದ ಸಾಗಿಸಬಲ್ಲದು. ಅದಕ್ಕಾಗಿಯೇ ಇದನ್ನು "ಮರುಭೂಮಿಯ ಹಡಗೆಂದು" ಕರೆಯುತ್ತಾರೆ.

ಆದ್ದರಿಂದ, ಬ್ರೂಕ್ ಬಾಂಡ್ ಸೇಲ್ಸ್ ಮನ್ನನ ಮತ್ತು ಅವನ ಹಡಗಾದ ಒಂಟೆಯ ಮೂಲಕವೇ ತಾಜಾ ಬ್ರೂಕ್ ಬಾಂಡ್ ಚಹಾವು ಕ್ರಮವಾಗಿ ಈ ಜನಗಳಿಗೆ ಒದಗಿಸಲ್ಪಡುತ್ತದೆ.

**ಬ್ರೂಕ್ ಬಾಂಡ್ ಇಂಡಿಯಾ ಪ್ರೈವೇಟ್ ಲಿಮಿಟೆಡ್**

BB 228

# ಚಂದಮಾಮ

ಸಂಚಾಲಕರು: 'ಚಕ್ರಪಾಣಿ'

ಯಾವಾಗಲೂ ಸುಖವಿರಬೇಕೆಂಬುದೇ ನಮ್ಮ ಬಯಕೆ. ಸುಖದ ಜತೆಯಲ್ಲೇ ದುಃಖವೂ ಹುಟ್ಟಿದೆ. ದುಃಖವನ್ನು ಕೂಡಾ ಅನುಭವಿಸಲೇಬೇಕೆಂಬುದನ್ನು ನಾವು ಯೋಚಿಸುವುದಿಲ್ಲ. ಸುಖದುಃಖಗಳು ಹಗಲಿರುಳುಗಳಹಾಗೆ, ಬಿಳುಪು ಕಪ್ಪಿನಹಾಗೆ ಜತೆಯಾಗಿರುತ್ತವೆ. ಒಂದಿಲ್ಲದಿದ್ದರೆ ಇನ್ನೊಂದೂ ಇರುವುದಿಲ್ಲ. ನಾವು ಸುಖದಸವಿಗೆಮಾತ್ರ ಹೊಂದಿಕೊಂಡಿದ್ದರೆ ಹೇಡಿಗಳಾದೇವು. ದುಃಖದ ಕಹಿಯನ್ನೂ ಧೈರ್ಯದಿಂದ ಅನುಭವಿಸಿ ಧೀರರಾಗಬೇಕೆಂಬುದೇ ಯುಗಾದಿಯ ಸಂದೇಶ.

ಸಂಪುಟ ೨೦] ಏಪ್ರಿಲ್ ೧೯೬೮ [ಸಂಚಿಕೆ ೪



## ಮುಖಚಿತ್ರ

ಅರ್ಜುನನು ನೆಟ್ಟಗೆ ದುರ್ಯೋಧನನ ಕಡೆ ನುಗ್ಗುತ್ತಿರುವುದನ್ನು ಕಂಡು ಕೌರವ ಯೋಧರು ಅವನ ಸಹಾಯಕ್ಕೆ ಹೊರಟರು. ಆಗ ಅರ್ಜುನನು ಗಟ್ಟಿಯಾಗಿ ಶಂಖ ನಾದಮಾಡಲು, ವಿರಾಟರಾಜನ ಗೋವುಗಳು ಚೆದರಿ ಮನೆಗಳತ್ತ ಓಡಿದುವು. ಯುದ್ಧದಲ್ಲಿ ಮೊದಲು ಕೃಪಾಚಾರ್ಯನು ಅರ್ಜುನನಿಗೆ ಎದುರಾದನು. ಕೊಂಚಹೊತ್ತಿಗೆ ಅರ್ಜುನನು ಕೃಪಾಚಾರ್ಯನ ರಥ, ಕುದುರೆ ಮತ್ತು ಸಾರಥಿಯನ್ನು ಭಗ್ನಗೊಳಿಸಿದನು. ತರುವಾಯ ದ್ರೋಣಾಚಾರ್ಯರು ಅರ್ಜುನನನ್ನು ಇದಿರ್ಗೊಂಡರು.

ದ್ರೋಣಾಚಾರ್ಯರು ತಾವಾಗಿ ಬಾಣಬಿಡುವ ತನಕ ಅರ್ಜುನನು ತನ್ನ ಗುರುಗಳಮೇಲೆ ಬಾಣವನ್ನು ಪ್ರಯೋಗಿಸಲಿಲ್ಲ. ತರುವಾಯ ಇಬ್ಬರೂ ಶಸ್ತ್ರಾಸ್ತ್ರಗಳಿಂದ ಭಯಂಕರವಾದ ಯುದ್ಧ ನಡೆಸಿದರು. ದ್ರೋಣಾಚಾರ್ಯರು ಸೋತು ಹೋದ ಕೂಡಲೇ ಕೌರವ ಸೇನೆಯಲ್ಲಿ ಹಾಹಾಕಾರವುಂಟಾಯಿತು.

ತನ್ನ ತಂದೆಗಾದ ಪರಾಜಯವನ್ನು ನೋಡಿ ಸಹಿಸಲಾರದೆ ಅಶ್ವತ್ಥಾಮನು ಅರ್ಜುನನಮೇಲೆ ಬಿದ್ದು ಯುದ್ಧಮಾಡುತ್ತಿರಲು ಕರ್ಣನು ಬಂದನು. ಆಗ ಅರ್ಜುನನು ಕರ್ಣನಮೇಲೆ ತೀವ್ರವಾಗಿ ಯುದ್ಧಮಾಡಿದನು. ಕರ್ಣನ ಎದೆಗೆ ಬಾಣ ನೆಟ್ಟುಕೊಂಡಿತು. ಕರ್ಣನು ಯುದ್ಧರಂಗದಿಂದ ಪಲಾಯನಮಾಡಿದನು.

ಅದನ್ನು ಕಂಡು ಭೀಷ್ಮನು ಅರ್ಜುನನಮೇಲೆ ಎರಗಿದನು. ಈ ಯುದ್ಧದಲ್ಲಿ ಅರ್ಜುನನಿಗೆ ತುಂಬಾ ಗಾಯಗಳಾದುವು. ಆದರೂ ಭೀಷ್ಮನು ಸೋತುಹೋದನು. ತರುವಾಯ ದುರ್ಯೋಧನನು ತನ್ನ ಪ್ರತಾಪತೋರಲು ಬಂದು, ಏಟುತಿಂದು, ನರಳುತ್ತಾ ಪರಾರಿಯಾಗಬೇಕಾಯಿತು. ಉತ್ತರಕುಮಾರನು ತನ್ನ ತಂಗಿಗೆ ಒಳ್ಳೊಳ್ಳೆ ಬಟ್ಟೆಗಳನ್ನು ಆರಿಸಿ ತೆಗೆದುಕೊಂಡನು. ಅವರು ನಗರದ ಕಡೆ ಹೊರಟರು.

ನಗರಕ್ಕೆ ಈ ಸುದ್ದಿ ಬಂದ ಸಮಯದಲ್ಲಿ ವಿರಾಟರಾಜನು, ಧರ್ಮರಾಯನೊಂದಿಗೆ ಪಗಡೆಯಾಡುತ್ತಿದ್ದನು. "ನೋಡಿದೆಯಾ, ನನ್ನ ಮಗ ಕೌರವ ಯೋಧರನ್ನು ಸೋಲಿಸಿ, ವಿಜಯಶಾಲಿಯಾಗಿ ಬರುತ್ತಿದ್ದಾನೆ" ಎಂದ ವಿರಾಟ ರಾಜ.

"ಆ ಕಾರ್ಯ ಬೃಹನ್ನಳೆಯಿಂದ ಆಗಿರಬೇಕೇ ಹೊರತು ನಿನ್ನ ಮಗನಿಂದ ಸಾಧ್ಯವಲ್ಲ" ಎಂದ ಧರ್ಮರಾಜ. ಆ ಮಾತು ಕೇಳಿ ವಿರಾಟನು ಕೆರಳಿ ಧರ್ಮರಾಜನ ಮೇಲೆ ದಾಳಗಳನ್ನು ಎಸೆದನು. ಧರ್ಮರಾಜನ ಹಣೆಯಿಂದ ರಕ್ತಸುರಿಯಲಾರಂಭಿಸಿತು. ಕೂಡಲೇ ಪಕ್ಕದಲ್ಲಿದ್ದ ದ್ರೌಪದಿ ತನ್ನ ಸೀರೆಯ ಸೆರಗನ್ನು ಆತನ ಹಣೆಗೆ ಒತ್ತಿಹಿಡಿದು ರಕ್ತ ಕೆಳಗೆ ಬೀಳದಂತೆ ತಡೆದಳು.



# ವೈರಾಗ್ಯ

[ಕಳೆದ ತಿಂಗಳಿನಿಂದ ಮುಂದುವರಿದುದು]

**ಅಂ**ದಿನಿಂದ ರಾಜನು ಎಲ್ಲರ ಸಂಪರ್ಕವನ್ನು ತೊರೆದುಬಿಟ್ಟನು. ಯಾರನ್ನೂ ನೋಡುತ್ತಿರಲಿಲ್ಲ; ಯಾರೊಂದಿಗೂ ಮಾತನಾಡುತ್ತಿರಲಿಲ್ಲ. ಹೀಗೆ ನಾಲ್ಕು ತಿಂಗಳು ಕಳೆಯಿತು. ರಾಜಭವನ ಆತನಿಗೊಂದು ಬಂದೀಖಾನೆಯಂತೆ ತೋರಿತು. ಅಲ್ಲಿಂದ ಹೊರಬೀಳಬೇಕೆಂಬ ಕೋರಿಕೆ ಆತನಲ್ಲಿ ಬಲವಾಯಿತು.

ಆತನು ತನ್ನ ನೌಕರನನ್ನು ಕೂಗಿ ತನಗೆ ಕಾಷಾಯವಸ್ತ್ರಗಳನ್ನೂ, ಮಣ್ಣಿನ ಪಾತ್ರೆಯನ್ನೂ ತಂದುಕೊಡುವಂತೆ ಹೇಳಿದನು. ನಾಯಿಂದನನ್ನು ಕರೆಯಿಸಿ ತನ್ನ ತಲೆಯನ್ನು ಮುಂಡನ ಮಾಡಿಸಿಕೊಂಡನು. ಮಾರನೇಯ ದಿನ ಆತನು ಕಾಷಾಯವಸ್ತ್ರಗಳನ್ನು ಧರಿಸಿ ಒಂದು ಕೈಯಲ್ಲಿ ಮಣ್ಣಿನ ಪಾತ್ರೆಯನ್ನೂ, ಮತ್ತೊಂದು ಕೈಯಲ್ಲಿ ಕೋಲನ್ನೂ ಹಿಡಿದು ಉಪ್ಪರಿಗೆಯಿಂದ ಕೆಳಗಿಳಿದು ಬಂದನು. ಆಗ ರಾಣಿ ನೋಡಿದಳಾದರೂ ಗುರುತು ಹಿಡಿಯಲಿಲ್ಲ; ಅಷ್ಟೇಕೆ, ಯಾರೂ ಆತನ ಗುರುತು ಹಿಡಿಯದಾದರು. ಹೊರಗೆ ಹೋಗುತ್ತಿದ್ದಾಗ ಯಾರೂ ಆತನಿಗೆ ಏನೊಂದೂ ತಡೆ ಹಾಕಲಿಲ್ಲ.

ಆದರೆ ಶೀಘ್ರದಲ್ಲೇ ನಿಜಸಂಗತಿ ಹೊರಬಿತ್ತು, ಸೀವಲಿದೇವಿ ಉಪ್ಪರಿಗೆಗೆ ಹೋಗಿ ಅಲ್ಲಿ ತನ್ನ ಗಂಡನ ಕೇಶರಾಶಿ ಕೆಳಗೆಬಿದ್ದಿರುವುದನ್ನು ಕಂಡಳು. ಅರಮನೆಯಲ್ಲೆಲ್ಲಾ ರಾಜನಿಗಾಗಿ ಹುಡುಕಿದರು. ರಾಜನು ಸನ್ಯಾಸ ಸ್ವೀಕರಿಸಿದನೆಂದು ತಿಳಿಯಿತು. ರಾಜಕುಟುಂಬದವರು ಗೋಳೋ ಎಂದು ಅಳುತ್ತಾ ಸನ್ಯಾಸಿ ಹೋದ ದಿಕ್ಕಿನ ಕಡೆ ಹೊರಟರು. ಸೀವಲಿದೇವಿ ಇತರ ರಾಣಿಯರೊಂದಿಗೆ ಮಹಾರಾಜನಬಳಿ ಸಾರಿ, ಅರಮನೆಗೆ ಹಿಂತಿರುಗಬೇಕೆಂದು ಪರಿಪರಿಯಾಗಿ ಬೇಡಿಕೊಂಡಳು. ಆಕೆ ಮಾಡಿದ ಪ್ರಯತ್ನವೆಲ್ಲಾ ವಿಫಲವಾಯಿತು.

ಸೀವಲಿದೇವಿ ಸೇನಾನಾಯಕನನ್ನು ರಹಸ್ಯವಾಗಿ ಕರೆದು ನಗರದ ಅನೇಕ ಭಾಗಗಳಲ್ಲಿ ಬೆಂಕಿ ಹಚ್ಚಿಸುವಂತೆ ಹೇಳಿದಳು. ಹಾಗೆ

ಬೆಂಕಿ ಉರಿಯುತ್ತಿದ್ದಾಗ ರಾಣಿ ತನ್ನ ಗಂಡನ ಬಳಿ ಸಾರಿ "ಮಹಾಪ್ರಭು, ನಿಮ್ಮ ಮಿಥಿಲಾ ನಗರಕ್ಕೆ ಬೆಂಕಿಬಿದ್ದಿದೆ. ನಿಮ್ಮ ಸಂಪತ್ತೆಲ್ಲಾ ಅಗ್ನಿಪಾಲಾಗುತ್ತಿದೆ. ಅದನ್ನು ಕಾಪಾಡಿ ಕೊಳ್ಳಿ ಬನ್ನಿ" ಎಂದಳು.

"ರಾಣಿ, ನನಗೆ ಆಸ್ತಿಯೇ ಇಲ್ಲದಿರುವಾಗ ಅದನ್ನು ಕಳೆದುಕೊಳ್ಳುವ ಮಾತೆಲ್ಲಿ ಬಂತು?" ಎಂದ ಮಹಾರಾಜ ಗಂಭೀರವಾಣಿಯಿಂದ.

ಆತನು ಹೆಜ್ಜೆ ಹಾಕುತ್ತಾ ನಗರವನ್ನು ದಾಟಿ ಹೊರಟನು. ರಾಣಿ ಮತ್ತು ಪ್ರಜೆಗಳು ಆತನನ್ನು ಹಿಂಬಾಲಿಸಿದರು. ಅವರನ್ನು ತಡೆಯಲು ಆತನು ಒಂದುಕ್ಷಣ ನಿಂತು, ಪ್ರಜೆಗಳನ್ನು ಕುರಿತು "ಈ ದೇಶದ ಅಧಿಪತಿ ಯಾರು?" ಎಂದನು.

"ಚಿತ್ತ, ಮಹಾಪ್ರಭುಗಳು" ಎಂದಿತು ಪ್ರಜಾಸಮುದಾಯ. "ಹಾಗಾದರೆ ಈ ಗೆರೆಯನ್ನು ದಾಟಿ ಬಂದವರಿಗೆ ಶಿಕ್ಷೆ ವಿಧಿಸಿ" ಎಂದು ತನ್ನ ಕೋಲಿನಿಂದ ದಾರಿಗೆ ಅಡ್ಡವಾಗಿ ಒಂದು ಗೆರೆ ಎಳೆದು ತಾನು ಮುಂದಕ್ಕೆ ನಡೆದನು. ಜನ ಬೆರಗಾಗಿ ನಿಂತಲ್ಲೇ ನಿಂತರು. ಕೊಂಚಹೊತ್ತು ಯಾರೂ ಆ ಗೆರೆಯನ್ನು ದಾಟಲಿಲ್ಲ. ಗಂಡನು ಹೊರಟುಹೋಗುತ್ತಿರುವುದನ್ನು ನೋಡಲಾರದೆ ಸೀವಲಿದೇವಿ ಗೆರೆ ದಾಟಿ ಮುಂದೆ ಓಡಿದಳು. ಕೂಡಲೇ ಪ್ರಜೆಗಳೂ ಆಕೆಯನ್ನು ಹಿಂಬಾಲಿಸಿದರು. ಸೀವಲಿದೇವಿ ಗಂಡನನ್ನು ಸಮೀಪಿಸಿ ಆತನ ಪಾದಗಳ ಮೇಲೆ ಬಿದ್ದು "ಈ ಪ್ರಜಾಕೋಟಿಯ ಮಾತು ನಡೆಯಿಸಿಕೊಡಿ. ನೀವು ಹಿಂದಿರುಗಿ



ಬಂದು ರಾಜ್ಯಪಾಲನೆ ಮಾಡಬೇಕೆಂದು ಅವರೆಲ್ಲರ ಕೋರಿಕೆ,'' ಎಂದಳು.

"ನಾನು ಅವರೆಲ್ಲರನ್ನೂ ವರ್ಜಿಸಿದೆನು. ಸ್ನೇಹಿತರು, ಬಂಧುಗಳು, ಮನೆ, ದೇಶ ಎಲ್ಲವನ್ನು ತೊರೆದಿರುವೆನು.'' ಎಂದ ರಾಜ. "ನೀವು ಸನ್ಯಾಸ ವಹಿಸಿದರೆ ನನ್ನ ಗತಿ ಏನು?'' ಪ್ರಶ್ನಿಸಿದಳು ರಾಣಿ. "ನಿನ್ನ ಮಗನು ಧರ್ಮಿಷ್ಠನಾಗಿ ರಾಜ್ಯಭಾರಮಾಡುವಂತೆ ನೋಡಿಕೊಳ್ಳುತ್ತಿರು.'' ಎಂದ ರಾಜ.

ಅವರು ಮಾತನಾಡುತ್ತಿರುವಾಗ ಸೂರ್ಯಾಸ್ತಮವಾಯಿತು. ರಾತ್ರಿ ಎಲ್ಲರೂ ಒಂದು ಕಡೆ ತಂಗಿದರು. ಬೆಳಗಾದಕೂಡಲೇ ಮಹಾಜನಕನು ತನ್ನ ಪ್ರಯಾಣವನ್ನು ಮುಂದುವರಿಸಿದನು. ತುಸ ಹಿಂದೆ ಬರುವಂತೆ ರಾಣಿ ತನ್ನ ಪರಿವಾರದವರಿಗೆ ಹೇಳಿ, ತಾನೊಬ್ಬಳೇ ಪತಿಯನ್ನು ಹಿಂಬಾಲಿಸಿಕೊಂಡು ನಡೆದಳು.

ಹಾಗೇ ಹೊರಟು ಅವರು ಒಂದು ನಗರವನ್ನು ತಲುಪಿದರು. ನಗರದ್ವಾರದ ಬಳಿ ಕೆಲವಾರು ಮಕ್ಕಳು ಆಟವಾಡುತ್ತಿದ್ದರು. ಬಾಲಕಿಯೊಬ್ಬಳು ದೂರದಿಂದ ಏನನ್ನೋ ಕೇರುತ್ತಿದ್ದಳು. ಅವಳು ಒಂದು ಕೈಗೆ ಒಂದು ಬಳೆಯನ್ನೂ, ಮತ್ತೊಂದು ಕೈಗೆ ಎರಡು ಬಳೆಗಳನ್ನೂ ಹಾಕಿಕೊಂಡಿದ್ದಳು. ಮೊರವನ್ನು ಆಡಿಸಿದಾಗಲೆಲ್ಲಾ ಒಂದು ಕೈಯ ಬಳೆಗಳು ಶಬ್ದಮಾಡುತ್ತಿದ್ದುವು. ಇದನ್ನು ಕಂಡು ಮಹಾಜನಕನಿಗೆ ಒಂದು ಯೋಚನೆ ಹೊಳೆಯಿತು. ಆತನು ಆ ಹುಡುಗಿಯನ್ನು ಸಮೀಪಿಸಿ "ಮಗೂ, ನಿನ್ನ ಕೈಯೊಂದು



ಮಾತ್ರ ಶಬ್ದಮಾಡುತ್ತಿದೆಯೇ ಹೊರತು ಮತ್ತೊಂದು ಮಾಡುತ್ತಿಲ್ಲ. ಕಾರಣವೇನು?" ಎಂದು ಕೇಳಿದನು. ಹುಡುಗಿ: "ಅಯ್ಯಾ, ಈ ಕೈಯಲ್ಲಿ ಎರಡು ಬಳೆಗಳಿರುವುದರಿಂದ ಶಬ್ದವಾಗುತ್ತಿದೆ. ಎರಡನೇಯದು ಅನರ್ಥ" ಎಂದಳು. ರಾಜನು ಶೀವಲಿದೇವಿಯ ಕಡೆ ತಿರುಗಿ "ಕೇಳಿದೆಯಾ? ನನ್ನ ಸಂಗಡ ನೀನು ಬಂದರೆ ಈ ಹುಡುಗಿ ಹೇಳಿದಂತೆ ನೀತಿ ಗೆಟ್ಟವನಾಗುತ್ತೇನೆ" ಎಂದ.

ರಾಣಿ ತಲೆ ತಗ್ಗಿಸಿ ತನ್ನ ಗಂಡನು ಮುಂದೆ ನಡೆಯಲು ಅವಕಾಶಮಾಡಿಕೊಟ್ಟಳು. ಆದರೆ ಮರುಕ್ಷಣವೇ ಆಕೆ ಓಡಿ ಹೋಗಿ ಮತ್ತೆ ಆತನೊಂದಿಗೆ ನಡೆಯ ತೊಡಗಿದಳು. ಅವರು ಕೊಂಚದೂರ ನಡೆದು ಒಬ್ಬ ಕಮ್ಮಾರನ ಕುಲುಮೆಯಬಳಿಗೆ ಬಂದರು.

ಅಲ್ಲಿ ಕಮ್ಮಾರನು ಒಂದು ಬಾಣವನ್ನು ತಯಾರುಮಾಡುತ್ತಿದ್ದನು. ಬಾಣ ನೆಟ್ಟಗಿರುವುದೋ ಇಲ್ಲವೋ ನೋಡಲು ತನ್ನ ಕಣ್ಣಿದಿರಾಗಿ ಹಿಡಿದು ಎರಡನೇ ಕಣ್ಣನ್ನು ಮುಚ್ಚಿಕೊಂಡನು. ಆಗ ರಾಜನು "ತಮ್ಮಾ, ದೇವರು ನೋಡಲು ನಿನಗೆ ಎರಡು ಕಣ್ಣುಗಳನ್ನು ಕೊಟ್ಟಿದ್ದರೂ ಒಂದು ಕಣ್ಣನ್ನೇಕೆ ಮುಚ್ಚಿಕೊಂಡಿರುವೆ?" ಎಂದು ಕೇಳಿದನು.

"ಎರಡು ಕಣ್ಣಗಳಿಂದ ನೋಡಿದರೆ ನೇರವಾಗಿರುವುದು ತಿಳಿಯುವುದೇ? ನೆಟ್ಟಗಿರುವುದೋ ಇಲ್ಲವೋ ತಿಳಿಯಲು ಒಂದು ಕಣ್ಣಿಂದಲೇ ನೋಡಬೇಕು." ಎಂದ ಕಮ್ಮಾರ.

ತನ್ನ ಪತಿ ತನಗಿನ್ನು ದಕ್ಕುವುದಿಲ್ಲವೆಂದು ಶೀವಲಿದೇವಿ ಅರಿತಳು. ಆಕೆಗೆ ಬವಳಿ ಬಂದು ಬಿದ್ದುಬಿಟ್ಟಳು. ಮಹಾಜನಕನು ಅರಣ್ಯವನ್ನು ಪ್ರವೇಶಿಸಿ ಮಾಯವಾದನು.

ಪರಿವಾರದವರು ಬಂದು ಪ್ರಜ್ಞಾಹೀನಳಾಗಿ ಬಿದ್ದಿದ್ದ ರಾಣಿಯನ್ನು ಶೈತ್ಯೋಪಚಾರದಿಂದೆಬ್ಬಿಸಿದರು. ಆಕೆ ನಗರಕ್ಕೆ ಹಿಂತಿರುಗಿ ತನ್ನ ಮಗ ದೀರ್ಘಾಯುಸುವಿಗೆ ಪಟ್ಟಾಭಿಷೇಕ ಮಾಡಿಸಿದಳು. ಆಕೆ ಮಾತ್ರ ಅರಮನೆಯಲ್ಲಿ ಕಾಲಿಡಲಿಲ್ಲ. ಉದ್ಯಾನದಲ್ಲಿದ್ದು, ಸನ್ಯಾಸಿನಿಯಂತೆ ಜೀವನ ಸಾಗಿಸುತ್ತಿದ್ದಳು.

ಮಹಾಜನಕನು ತಪಸ್ಸುಮಾಡಿ ಏಳು ದಿನಗಳಿಗೆಲ್ಲಾ ಸಿದ್ಧಿಯನ್ನು ಸಾಧಿಸಿದನು.





# ನರಿಯಣ್ಣನ ನರಳಾಟ

ಕಾಡೊಂದರಲ್ಲಿ ರೈತನೊಬ್ಬನು ವಾಸಮಾಡಿ ಕೊಂಡಿದ್ದನು. ಅವನು ಸ್ವಲ್ಪ ಭೂಮಿಯಲ್ಲಿ ವಿವಿಧ ಸೊಪ್ಪುಗಳನ್ನೂ, ತರಕಾರಿಯನ್ನೂ ಬೆಳೆಸುತ್ತಿದ್ದನು. ಆ ಕಾಡಿನಲ್ಲಿದ್ದ ಮೊಲ ದಿನಾ ಸೊಪ್ಪನ್ನು ತಿನ್ನಲಾರಂಭಿಸಿತು.

ತನ್ನ ತೋಟದಲ್ಲಿನ ಸೊಪ್ಪನ್ನು ಯಾರೋ ತಿಂದುಬಿಡುತ್ತಿರುವುದನ್ನು ಗಮನಿಸಿ, ಆ ರೈತನು ಒಂದುದಿವಸ ಉರುಲುಹರಡಿದನು.

ಉರುಲನ್ನು ತಿಳಿಯದೆ ಮೊಲ ಅದರಲ್ಲಿ ಸಿಲುಕಿಕೊಂಡಿತು. ಮೊಲಕ್ಕೆ ತಪ್ಪಿಸಿಕೊಳ್ಳುವ ಮಾರ್ಗ ತಿಳಿಯಲಿಲ್ಲ.

ಬೆಳಗಿನಜಾವ ರೈತನು ಬಂದನು. ಮೊಲ ವನ್ನು ನೋಡಿ "ಓಹೋ, ಕಳ್ಳ ಅಂತೂ ಸಿಕ್ಕಿತು. ನಿತ್ಯ ನನ್ನ ಸೊಪ್ಪು ತಿಂದು ಹೋಗ ಬೇಕೆಂದಿದ್ದೆಯಲ್ಲವೇ? ನಿನಗೆ ಮಾಡುತ್ತೇನೆ ಇರು" ಎಂದು ಮೊಲಕ್ಕೆ ಬುದ್ಧಿ ಕಲಿಸಲು ಹುಣಿಸೆಟೊಂಗೆ ತರಲು ಎಲ್ಲಿಗೋ ಹೋದನು.

"ಇಂದಿಗೆ ನನ್ನ ಆಯುಷ್ಯ ಮುಗಿಯಿತು." ಎಂದು ಚಿಂತಿಸುತ್ತಾ ಕುಳಿತಿತ್ತು ಮೊಲ.

ಆ ಸಮಯಕ್ಕೆ ಸರಿಯಾಗಿ ನರಿ ಆಕಡೆ ಬಂದು ಮೊಲವನ್ನು ಕಂಡು "ಓಹೋ, ಏನು ಮೊಲ? ಇಲ್ಲೇಕೆ ಕುಳಿತಿರುವೆ. ನಿನ್ನ ಕೊರಳಲ್ಲಿರುವುದೇನು?" ಎಂದು ಕೇಳಿತು. ಮೊಲ ಹೊಟ್ಟೆಹಿಡಿದುಕೊಂಡು ನಗುವಂತೆ ನಟಿಸುತ್ತಾ "ಒಂದು ತಮಾಷೆ ನಡೆಯಿತು ನರಿಯಣ್ಣ. ಮನೆಯಲ್ಲಿ ಮರಿಗಳಿಗೆ ಸ್ವಸ್ಥ ವಿಲ್ಲ. ನಾಲ್ಕು ಕಸ್ತೂರಿಮಾತ್ರೆ ತರಲು ವೈದ್ಯರ ಬಳಿಗೆ ಹೋಗುತ್ತಿದ್ದೆ. ಹಸು ಅತ್ತೆ ಎದುರಾಗಿ 'ನನ್ನ ಮಗಳಿಗೆ ಮದುವೆ, ನೀನು ಬರಲೇ ಬೇಕು' ಎಂದಿತು. ನಾನು ಅವಸರದ ಕೆಲ ಸದಮೇಲೆ ಹೋಗುತ್ತಿದ್ದೇನೆ. ಈಬಾರಿ ಕ್ಷಮಿಸಿ ಬಿಡು ಅತ್ತೆ ಅಂತಹೇಳಿದೆ. ಆದರೆ ಹಸು ಬಲವಂತಮಾಡಿತು. ನನ್ನ ಕೆಲಸ ಮುಗಿಸಿ ಕೊಂಡು ಬರುವುದಾಗಿ ಹೇಳಿದೆ. ಹಸು ನಂಬ ಲಿಲ್ಲ. ಇಲ್ಲಿ ನನ್ನನ್ನು ಕಟ್ಟಿಹಾಕಿ, ಮದುವೆಗೆ ಕರೆದೊಯ್ಯಲು ಯಾರನ್ನಾದರೂ ಕಳುಹಿಸಿ ಕೊಡುವುದಾಗಿ ಹೇಳಿಹೋದಳು. ಇದು ನಡೆದ ಸಂಗತಿ. ನನ್ನನ್ನು ಈ ಬಂಧನದಿಂದ ಬಿಡಿಸಿ

ಎಸ್. ನಂಜುಂಡಯ್ಯ

ದರೆ ನಿನಗೆ ಪುಣ್ಯಬರುತ್ತೆ. ಮರಿಗಳಿಗೆ ಮಾತ್ರೆಯೆರೆದಹೊರತು ಬೇರೆ ಕೆಲಸ ಮಾಡುವಂತಿಲ್ಲ ನಾನು. ಮದುವೆಗೆ ಹೋಗಲಿಷ್ಟವಿದ್ದರೆ ನನ್ನ ಸ್ಥಳದಲ್ಲಿ ನಿನ್ನನ್ನು ಕಟ್ಟಿಹಾಕುತ್ತೇನೆ. ಬಂದವರು ನಿನ್ನನ್ನು ಕರೆದುಕೊಂಡು ಹೋಗುತ್ತಾರೆ" ಎಂದಿತು ಮೊಲ.

"ಆಗಲಿ ನಾನು ನಿನ್ನನ್ನು ಬಂಧನದಿಂದ ಬಿಡಿಸುವೆನು. ನೀನು ನನ್ನನ್ನು ಕಟ್ಟಿಬಿಡು. ನನ್ನನು ಯಾರು ಯಾವ ಮದುವೆಗೂ ಆಹ್ವಾನಿಸುವುದಿಲ್ಲ" ಎಂದಿತು ನರಿ.

ಮೊಲ ನರಿಯನ್ನು ಕಟ್ಟಿಹಾಕಿ "ನಾನು ವೈದ್ಯರಲ್ಲಿಗೆ ಹೋಗಿಬರುತ್ತೇನೆ. ಇನ್ನೇನು ಮದುವೆಮನೆಯವರು ಬರಬಹುದು" ಎಂದು ಹೇಳಿ ಕೊಂಚದೂರ ಹೋಗಿ ಒಂದು ಪೊದೆಯಲ್ಲಿ ಬಚ್ಚಿಟ್ಟುಕೊಂಡಿತು.

ರೈತನು ಹುಣಿಸೆಟೊಂಗೆಯನ್ನು ತೆಗೆದುಕೊಂಡು ಬಂದನು. ನರಿಯನ್ನು ನೋಡಿ "ಇದೇನು ಆಶ್ಚರ್ಯ. ಸಸಿಗಳನ್ನು ಹಾಳು ಮಾಡುತ್ತಿದ್ದ ಮೊಲದಬದಲು ಕೋಳಿಕದಿಯುವ ನೀನು ದೊರೆತೆಯಾ? ನಿನಗೆ ಶರೀರ ಶುದ್ಧಿಮಾಡ್ತೇನೆ" ಎಂದು ಹುಣಿಸೆಟೊಂಗೆಯಿಂದ ನರಿಯನ್ನು ಚೆನ್ನಾಗಿ ಬಾರಿಸಿದನು.

ತರುವಾಯ ರೈತನು ತನ್ನ ನಾಯಿಗಳನ್ನು ಕರೆತರಲು ಹೋದನು. ಆಗ ಮೊಲ ಮರೆಯಿಂದ ಹೊರಗೆಬಂತು. ನರಿಯನ್ನು ನೋಡಿ "ಇನ್ನೂ ಇಲ್ಲೇ ಇರುವೆಯಾ ನರಿಯಣ್ಣಾ? ಮದುವೆಮನೆಯವರು ಬರಲಿಲ್ಲವೇ?" ಎಂದು ವಿಚಾರಿಸಿತು. "ನನಗೆ ಮದುವೆಯೂ ಬೇಡ, ಮುಂಜಿಯೂ ಬೇಡ. ಬೇಗ ಈ ಉರುಲನ್ನು ಬಿಚ್ಚು" ಎಂದಿತು ನರಿ.

ಮೊಲ ಅದನ್ನು ತಲೆಗೆ ಹಾಕಿಕೊಳ್ಳದೆ ಹರಟೆಹೊಡೆಯಲಾರಂಭಿಸಿತು. ಕೂಡಲೇ ಉರುಲುಬಿಚ್ಚಿದರೆ ನರಿ ತನ್ನನ್ನು ಜೀವಸಹಿತ ಬಿಡುವುದಿಲ್ಲವೆಂದು ಮೊಲಕ್ಕೆ ತಿಳಿದಿತ್ತು.

ಅನತಿದೂರದಲ್ಲಿ ರೈತನು ನಾಯಿಗಳೊಂದಿಗೆ ಬರುತ್ತಿರುವುದು ಕಾಣಿಸಿತು. ಆಗ ಮೊಲ ನರಿಯ ಉರುಲನ್ನು ಬಿಚ್ಚಿತು. ನಾಯಿಗಳು ಬೊಗಳುತ್ತಾ ಸಮೀಪಿಸಿದುವು. ನರಿ ನಾಗಾಲೋಟದಿಂದ ಓಡಿತು. ಕ್ಷಣಾರ್ಧದಲ್ಲಿ ಮೊಲವೂ ಕಣ್ಮರೆಯಾಯಿತು.






## 15

[ಹಡಗು ನುಚ್ಚುನೂರಾಗಲು ಪಿಂಗಳನು ಒಂದು ಹಲಗೆಯ ಆಧಾರದಿಂದ ಸಮುದ್ರದಲ್ಲಿ ಈಜಿಕೊಂಡು ಹೋಗಿ ಒಂದು ಮರುಭೂಮಿಪ್ರಾಂತವನ್ನು ಸೇರಿದನು. ಅವನಿಗೆ ನವಾಬನ ಸೇನಾನಾಯಕ ಹಸನ್ ಗೋರಿ ಎಂಬುವನ ಪರಿಚಯವಾಯಿತು. ಇಬ್ಬರೂ ದರೋಡೆಕಾರರನ್ನು ಸೆರೆಹಿಡಿಯಲು ಇಫಿಕಿಲ್ಲಾ ಎಂಬ ಕೋಟೆಯಕಡೆ ಹೊರಟರು. ತರುವಾಯ....]

ನವಾಬನ ಒಂಟಿಯಪಡೆಯ ನಾಯಕನಾದ ಹಸನ್‌ಗೋರಿ ಕೈಬೀಸಿದಕಡೆ ಪಿಂಗಳನು ನೋಡಿದನು. ಆ ಮರುಭೂಮಿಯಲ್ಲಿ ಬಹು ದೂರದಲ್ಲಿ ಪುರಾತನ ಕೋಟೆಯೊಂದು ಕಾಣಿಸಿತು. ಕೋಟೆಯ ಪಕ್ಕದಲ್ಲಿ ತೊರೆಯೊಂದು ಹರಿಯುತಿತ್ತು. ಅದರ ಎರಡು ಕಡೆಗಳಲ್ಲೂ ಎತ್ತರವಾದ ಖರ್ಜೂರದ ಮರಗಳು ಗಾಳಿಗೆ ತೂಗುತ್ತಿದ್ದುವು. ಕೋಟೆಯ ಬುರುಜುಗಳ ಮೇಲಾಗಲೀ, ಗೋಡೆಯಮೇಲಾಗಲೀ ಮನುಷ್ಯರ ಸುಳುವು ಇರುವಂತೆ ಕಾಣಿಸಲಿಲ್ಲ. "ಇದೇಯೋ ಇಫಿಕಿಲ್ಲಾ?" ಎಂದು ಪಿಂಗಳನು ಕೇಳಿದನು. "ಹೌದು. ಅದೋ ದೂರದಲ್ಲಿ ಆ ಬೆಟ್ಟಗಳಕಡೆ ಮಸಕು ಮಸಕಾಗಿ ಸಾಗುತ್ತಿರುವ ಕಾಲುದಾರಿ ನಿನಗೆ ಕಾಣಿಸುತ್ತಿಲ್ಲವೇ? ಟೆಹರಾನಿನಿಂದ ಕೈರೋ ನಗರಕ್ಕೆ ವರ್ತಕರು ಆ ರಸ್ತೆಮಾರ್ಗವಾಗಿ ಹೋಗುತ್ತಾರೆ. ದಾರಿಯಲ್ಲಿರುವ ಈ ದುರ್ಗ ಪ್ರವಾಸಿಗಳಿಗೆ, ವರ್ತಕರಿಗೆ ಮಜಲಿಯಂತೆ ಉಪಯೋಗವಾಗುತಿತ್ತು. ನಡುದಾರಿಯಲ್ಲಿ ದರೋಡೆಕಾರರಿಂದ ಅಪಾಯವಾಗದಂತೆ ಅವರನ್ನು ರಕ್ಷಿಸಲು ಈ ಕೋಟೆಯನ್ನು ಇಲ್ಲಿ ನಿರ್ಮಿಸಲಾಯಿತು. ಇದನ್ನು ನೋಡಿಕೊಳ್ಳಲು





ಪಿಂಗಳನು ತನ್ನ ಒಂಟೆಯುನ್ನು ಮುಂದಕ್ಕೆ ನಡೆಸುತ್ತಾ "ಗೋರಿಸಾಬ್, ಕೋಟೆಯೊಳಗಡೆ ಏನು ನಡೆಯಿತೆಂಬುದನ್ನು ನಾವಿಲ್ಲಿಂದ ಊಹಿಸುವುದು ವೃಥಾಶ್ರಮವೆಂದು ನನಗೆ ತೋರುತ್ತಿದೆ. ದುರ್ಗವನ್ನು ಮುಟ್ಟದಹೊರತು ಇಲ್ಲಿ ಎಂತಹ ಘೋರ ಕಾಳಗ ನಡೆಯಿತೋ ಹೇಳಲಾರೆವು. ಬಹುಶಃ ದರೋಡೆಕಾರರು ದುರ್ಗದ ದ್ವಾರವನ್ನು ಸುಟ್ಟು ಬೂದಿಮಾಡಿ ತದನಂತರ ಒಳಗೆ ಪ್ರವೇಶಿಸಿ, ನಮ್ಮ ಸೈನಿಕರನ್ನು ಕೊಲೆಮಾಡಿರಬಹುದು" ಎಂದ.

"ಹೌದೌದು. ನಮ್ಮ ಸೈನಿಕರೆಂದರೆ ಸಾಮಾನ್ಯ ವೀರರೇನಲ್ಲ. ಭಾರಿಹೋರಾಟ ಮಾಡದೆ ನಮ್ಮ ಸೈನಿಕರು ಮಣಿಯುವವರಲ್ಲ. ಪ್ರಾಯಶಃ ನೂರಾರು ಕಳ್ಳರು ಒಟ್ಟಿಗೆ ಬಂದು ಕೋಟೆಯನ್ನು ಮುತ್ತಿರಲೂಬಹುದು" ಎಂದ ಹಸನ್‌ಗೋರಿ.

ಕ್ರಮೇಣ ಹಸನ್‌ಗೋರಿ ಮತ್ತು ಪಿಂಗಳರು ಹತ್ತಿದ್ದ ಒಂಟೆಗಳು ಕೋಟೆಯ ಗೋಡೆಯಪಕ್ಕದಲ್ಲೇ ನಡೆದು ಮಹಾದ್ವಾರವಿದ್ದ ಸ್ಥಳಕ್ಕೆ ಬಂದುವು. ಕೊಂಚಸಮಯದ ನಂತರ ಹಸನ್‌ಗೋರಿಯ ಅನುಚರರೂ ಅಲ್ಲಿಗೆ ಬಂದು ಸೇರಿದರು.

ಈ ದುರ್ಗದ ಮುಖದ್ವಾರ ಅಚ್ಚಳಿಯದಂತಿತ್ತು. ಒಳಗಿರುವವರು ಬಾಗಿಲು ಮುಚ್ಚಿರುವಹಾಗೆ ಕದಗಳೆರಡು ಒಂದಕ್ಕೊಂದು ಅಂಟಿಕೊಂಡಿದ್ದುವು. ಇವರು ಅನುಮಾನಪಟ್ಟಹಾಗೆ ಮುಂಬಾಗಿಲಿನಮುಂದೆ

ಇನ್ನೂರು ಜನ ಸೈನಿಕರಿದ್ದಾರೆ. ಅವರೆಲ್ಲ ಈಗೆಲ್ಲಿ? ಯಾರೂ ಕಾಣಿಸುವುದಿಲ್ಲ. ಎಲ್ಲ ನಿಶ್ಶಬ್ದವಾಗಿ, ನಿರ್ಮಾನುಷ್ಯವಾಗಿರುವಂತಿದೆ" ಎಂದ ಹಸನ್‌ಗೋರಿ.

"ನಾವು ದುರ್ಗವನ್ನು ಪ್ರವೇಶಿಸಿದ ಹೊರತು ವಾಸ್ತವಾಂಶವನ್ನು ತಿಳಿಯಲಾರೆವು. ಬಹುಶಃ ನೀವು ಸಂದೇಹಪಡುವಂತೆ ಆ ದರೋಡೆಗಾರ ರಣಹದ್ದು ತನ್ನ ಅನುಚರರೊಂದಿಗೆ ದುರ್ಗವನ್ನು ಸೇರಿ, ನಮ್ಮ ಸೈನಿಕರನ್ನು ಕೊಂದಿರಬಹುದು" ಎಂದ ಪಿಂಗಳ.

"ಅದೇನೂ ಅಸಂಭವವಲ್ಲ. ಆದರೆ ರಣಹದ್ದಿನ ಅನುಚರನೊಬ್ಬನಾದರೂ ಕಾಣಿಸುತ್ತಿಲ್ಲವಲ್ಲ! ಬಹಳ ವಿಸ್ಮಯಕರವಾಗಿದೆ" ವಿಸ್ಮಿತನಾಗಿ ನುಡಿದ ಗೋರಿ.











ಭಾರಿ ಕಾಳಗವಾವುದೂ ನಡೆದ ಸೂಚನೆ ಕಂಡುಬರಲಿಲ್ಲ. ಏನೂ ವಿಶೇಷವಿಲ್ಲದೆ ಪ್ರಶಾಂತವಾಗಿ ಕಾಣುತ್ತಿದ್ದ ದೃಶ್ಯವನ್ನು ನೋಡಿ ಹಸನ್‌ಗೋರಿ ಅಕಸ್ಮಾತ್ತಾಗಿ ಹೊಟ್ಟೆಬಿರಿಯುವಂತೆ ನಕ್ಕನು. ತರುವಾಯ ಒಂಟೆಯಮೇಲಿನಿಂದ ದುಢುಮ್ಮನೆ ಕೆಳಕ್ಕೆ ಹಾರಿ "ಪಿಂಗಳಾ, ನಾವು ಅನಗತ್ಯವಾಗಿ ಭೀತಿಗೊಂಡೆವು. ಆ ರಣಹದ್ದು ಎಷ್ಟೇ ಚಾಣಕ್ಯನಾದರೂ, ಶೂರನಾದರೂ ನಮ್ಮ ಸೈನಿಕರಮುಂದೆ ನಿಂತು ಹೋರಾಡುವ ಸಾಹಸ ಮಾಡಲಾರನು. ದುರ್ಗವು ಇಷ್ಟು ನಿಃಶಬ್ದವಾಗಿರಲು ಕಾರಣ ನನಗೀಗ ತಿಳಿಯಿತು" ಎಂದು ಕಿರುನಗೆ ಬೀರಿದನು.

ಪಿಂಗಳನು ಒಂದೂ ತಿಳಿಯದೆ ಹಸನ್ ಗೋರಿಯುಕಡೆ ಪ್ರಶ್ನಾರ್ಥಕವಾಗಿ ನೋಡಿದನು. ಹಸನ್‌ಗೋರಿ ಪಿಂಗಳನಬಳಿ ಸಾರಿ "ಅವರೆಲ್ಲ ಕಂಠಪೂರ್ತಿ ಕುಡಿದು ಅಮಲೇರಿ ಮಲಗಿರಬೇಕು" ಎಂದ.

ಪಿಂಗಳನು "ಒಂದುವೇಳೆ ಹಾಗೆಂದು ಭಾವಿಸಿದರೂ ಮರುಭೂಮಿಯಲ್ಲಿ ಬಿದ್ದಿದ್ದ ಸೈನಿಕನು ರಣಹದ್ದಿನ ಕೈಗೆ ಸಿಕ್ಕಿದುದು ಹೇಗೆ? ಅವನು ದುರ್ಗದ ಭಟರಲ್ಲೊಬ್ಬನಲ್ಲವೇ?" ಎಂದು ಪ್ರಶ್ನಿಸಿದನು.

"ಆ ದುರಹಂಕಾರಿ ದುರ್ಗದಿಂದ ಒಂಟಿಯಾಗಿ ಬಂದು, ಅಮಲಿನಲ್ಲಿ ಯಾವುದಾದರೊಂದು ಖರ್ಜೂರದ ಮರದಡಿ ಬಿದ್ದಿರಬೇಕು. ಆಗ ರಣಹದ್ದು ಅವನನ್ನು ನೋಡಿರಬೇಕು. ಮತ್ತಾವಕಾರಣವೂ ಇಲ್ಲ." ಎಂದ ಹಸನ್.

ಪಿಂಗಳನು ಒಂದುಕ್ಷಣ ಯೋಚಿಸಿ ದುರ್ಗದ ದ್ವಾರದಕಡೆ ನಡೆದು "ನಿಮ್ಮ ಊಹೆ ನಿಜವಿರಲೂಬಹುದು. ಇಲ್ಲ ನಾವು ಊಹಿಸಲಾಗದ ಯಾವುದಾದರೊಂದು ದಾರುಣ ಪ್ರಮಾದ ಪ್ರಾಪ್ತವಾಗಿದ್ದರೂ ಆಗಿರಬಹುದು. ನಿರ್ದಿಷ್ಟವಾಗಿ ಹೀಗೆಯೇ ನಡೆಯಿತೆಂದು ಏನನ್ನೂ ಹೇಳುವಂತಿಲ್ಲ. ಈಗ ಈಕೋಟೆಯ ಬಾಗಿಲಿಗೆ ಅಗಳಿ ಹಾಕಿರುವರೋ ಇಲ್ಲವೋ ಒಮ್ಮೆ ನೋಡುತ್ತೇನೆ" ಎಂದು ಬಹು ಎಚ್ಚರಿಕೆಯಿಂದ ಬಾಗಿಲನ್ನು ಸಮೀಪಿಸಿ, ಎತ್ತರವಾಗಿ ದೃಢವಾಗಿದ್ದ ಆ ದೇವದಾರು ಬಾಗಿಲನ್ನು ಹಿಂದಕ್ಕೆ ತಳ್ಳಿದನು. ಅವನು ಸ್ವಲ್ಪ ಕೂಡ ಬಲಪ್ರಯೋಗಮಾಡುವ ಆವಶ್ಯಕತೆ



ಯಿಲ್ಲವೆಂದು ಪಿಂಗಳನು ಕೂಡಲೇ ಗ್ರಹಿಸಿದನು. ಒಳಗಡೆಯಿಂದ ಅಗಳಿ ಹಾಕದಿದ್ದ ಕಾರಣ ಆ ಕದ ಕಿರ್ರನೆ ಶಬ್ದಮಾಡುತ್ತಾ, ಸ್ವಲ್ಪಮಾತ್ರ ಹಿಂದಕ್ಕೆ ಹೋಯಿತು.

ಕೂಡಲೇ ಪಿಂಗಳನು ಚಂಗನೆ ಹಾರಿ ಗೋಡೆಯ ಪಕ್ಕಕ್ಕೆ ಓಡಿದನು. ಮರುಕ್ಷಣವೇ ಭೂಮ್ಯಾಕಾಶಗಳು ಬಿರಿಯುವಂತಹ ಭಯಂಕರ ಶಬ್ದದಿಂದ ಬಾಗಿಲಹಿಂದೆ ಅಡಗಿಸಿಟ್ಟಿದ್ದ ಸಿಡಿಮದ್ದು ಸಿಡಿದು, ಕೋಟೆಬಾಗಿಲನ್ನೂ, ಮುಂಭಾಗದ ಗೋಡೆಯನ್ನೂ ನುಚ್ಚುನೂರು ಮಾಡಿ ಹಾರಿಸಿಬಿಟ್ಟಿತು.

ಆ ಶಬ್ದದೊಂದಿಗೆದ್ದ ಜ್ವಾಲೆ, ಹೊಗೆ ಅಲ್ಲಿದ್ದವರನ್ನೆಲ್ಲಾ ಭೀತಿಗೊಳಿಸಿತು. ಬಾಗಿಲಿನ ಹಲಗೆಚೂರುಗಳಿಂದ, ಗೋಡೆಯ ಕಲ್ಲುಗಳಿಂದ ಏಟುತಿಂದ ಕೆಲವರು ಬಾಧೆಯಿಂದ ಹಾಹಾಕಾರ ಮಾಡುತ್ತಿದ್ದರು. ಗಾಯಹೊಂದಿದ ಒಂಟೆಗಳು ಕಿವಿಗಳು ತೂತುಬೀಳುವಂತೆ ಅರಚುತ್ತಾ, ರಾವುತರನ್ನು ಕೆಳಗುರುಳಿಸಿ ಚಲ್ಲಾಪಿಲ್ಲಿಯಾಗಿ ಓಡಿದುವು. ಒಂದು ನಿಮಿಷದಮೊದಲ ನಿಃಶಬ್ದವಾಗಿದ್ದ ಸ್ಥಳದಲ್ಲಿ ಈಗ ಭಯಂಕರ ಕೋಲಾಹಲವೆದ್ದಿತು.

ಆ ಪ್ರದೇಶದಲ್ಲಿ ಹರಡಿದ್ದ ಹೊಗೆ ತಿಳಿಯಾದನಂತರ ಪಿಂಗಳನು ತನ್ನ ಸುತ್ತಮುತ್ತಲಾದ ವಿನಾಶವನ್ನು ನೋಡಿ ಭಯಕಂಪಿತನಾದನು. ತುಸ ಚೇತರಿಸಿಕೊಂಡನಂತರ ಹಸನ್ ಗೋರಿಯನ್ನು ಹುಡುಕಿಕೊಂಡು ಹೊರಟನು. ಆತನು ದೂರದಲ್ಲಿದ್ದ ಒಂದು ಖರ್ಜೂರದಮರದ ಹತ್ತಿರಕ್ಕೆ ಗಾಳಿಯಿಂದ ಎಸೆಯಲ್ಪಟ್ಟಿದ್ದನು. ಪಿಂಗಳನು ಬರುತ್ತಿರುವುದನ್ನು ಕಂಡು ಎದ್ದು ಕುಳಿತುಕೊಳ್ಳಲು ಗೋರಿ ಪ್ರಯತ್ನಿಸಿದನು. ಸಾಧ್ಯವಾಗದೆ ನಡುಗಿಕೊಂಡು ಬೀಳುತಿದ್ದನು.

ಪಿಂಗಳನು ಗೋರಿಯನ್ನು ಸಮೀಪಿಸಿ ತನ್ನ ಕೈಯನ್ನು ಆಸರೆಕೊಟ್ಟು "ಪೆಟ್ಟಾಗಲಿಲ್ಲವಷ್ಟೇ?" ಎಂದು ಕೇಳಿದನು.

"ಅಂತಹ ಪ್ರಮಾದವಾದ ಗಾಯವೇನೂ ಆಗಲಿಲ್ಲ. ಮದ್ದು ಸಿಡಿದಾಗೆದ್ದ ಗಾಳಿಯು ಹೊಡೆತಕ್ಕೆ ಇಲ್ಲಿಗೆ ಬಂದುಬಿದ್ದೆ. ಇಂದು ಗ್ರಹಚಾರ ನೆಟ್ಟಗಿತ್ತು. ಇಲ್ಲದಿದ್ದರೆ..." ಎಂದ ಗೋರಿ. "ಸಾವಿರಸಲ ಹೇಳಿ ಹಾಗೆಂತ. ಬಾಗಿಲುಸಲೀಸಾಗಿ ಹಿಂದಕ್ಕೆ ಸರಿದಾಗ ಅದರ



ಹಿಂದೆ ಏನೋ ಅಪಾಯವಿದೆಯೆಂದು ನಾನು ಕೂಡಲೇ ಗ್ರಹಿಸಿದೆನು. ಮಿಂಚಿನಂತೆ ಹೊಳೆದ ಸಂದೇಹದಿಂದಲೇ ನಾನು ಕೂಗಿಕೊಂಡು ದುರ್ಗದ ಗೋಡೆಯಪಕ್ಕಕ್ಕೆ ಓಡಿ ಬದುಕಿದೆ. ಆದರೆ ದುರದೃಷ್ಟವಶಾತ್, ನಾನು ಎಚ್ಚರಿಕೆಕೊಟ್ಟಾಗಲೇ, ತುಪಾಕಿಯ ಮದ್ದು ಸಿಡಿಯಿತು" ಎಂದು ಪಿಂಗಳನು ದುರ್ಗದ ಕಡೆ ಬೊಟ್ಟುಮಾಡಿ "ಸರ್ವನಾಶವಾಯಿತು. ಅನೇಕ ಒಂಟೆಗಳೂ, ಸೈನಿಕರೂ ಮೃತಪಟ್ಟಿದ್ದಾರೆ." ಎಂದ.

ಹಸನ್‌ಗೋರಿ ನರಳುತ್ತಾ ಎದ್ದುನಿಂತು, ಮೈಮೇಲಿನ ಧೂಳನ್ನು ಕೊಡವುತ್ತಾ "ಇದು ನಮ್ಮನ್ನು ಒಮ್ಮೆಗೇ ಕೊಲ್ಲಲು ರಣಹದ್ದು ಹೂಡಿದ್ದ ಪಿತೂರಿಯೆಂದು ಈಗ ತಿಳಿಯಿತು. ದುರ್ಗದಲ್ಲಿದ್ದ ಭಟರನ್ನೆಲ್ಲಾ ಹತಗೊಳಿಸಿ, ನಮ್ಮನ್ನು ನಾಶಮಾಡಲು ಈ ಕಪಟೋಪಾಯವನ್ನು ಪ್ರಯೋಗಿಸಿದ. ಅಳಿದುಳಿದ ಸೈನಿಕರೊಂದಿಗೆ ಈ ಕ್ರೂರನನ್ನು ಬೆನ್ನಟ್ಟಿಕೊಂಡು ಹೋಗಿ, ಚಿತ್ರಹಿಂಸೆಮಾಡಿ ಯಮಸದನಕ್ಕೆ ಕಳುಹಿಸುವುದೇ ನಮ್ಮ ಮುಂದಿನ ಕೆಲಸ" ಎಂದನು.

ನಂತರ ಗೋರಿ ಮತ್ತು ಪಿಂಗಳರು ಗಾಯಗೊಂಡ ಸೈನಿಕರನ್ನು ದುರ್ಗದ ಗೋಡೆಯ ನೆರಳಿಗೆ ಕರೆತಂದು ಅವರ ಗಾಯಗಳಿಗೆ ಚಿಕಿತ್ಸೆನಡೆಸಲು ಕೆಲವರನ್ನು ನೇಮಿಸಿ ಉಳಿದವರೊಂದಿಗೆ ದುರ್ಗವನ್ನು ಪ್ರವೇಶಮಾಡಿದರು.




ದುರ್ಗದಲ್ಲಿ ಎದುರಾದ ಭೀಕರದೃಶ್ಯವನ್ನು ಕಂಡು ಅವರಿಬ್ಬರೂ ಸ್ತಬ್ಧರಾದರು. ಅಲ್ಲಿದ್ದ ಭವನಗಳು ಡೇರೆಗಳು ಸುಟ್ಟು ಬೂದಿಯಾಗಿದ್ದುವು. ಹಲವಾರು ಮೋಟುಗೋಡೆಗಳು ದೆವ್ವಗಳಂತೆ ನಿಂತಿದ್ದುವು. ಎತ್ತ ನೋಡಿದರೂ ಬಟ್ಟೆಬರೆ, ಕತ್ತಿಗುರಾಣಿಗಳು ಚಲ್ಲಾಪಿಲ್ಲಿಯಾಗಿಬಿದ್ದಿದ್ದುವು. ಹತರಾಗಿದ್ದ ಸೈನಿಕರ ಶವಗಳು ಹೆಜ್ಜೆಹೆಜ್ಜೆಗೆ ಸಿಕ್ಕುತ್ತಿದ್ದುವು.

"ಪಿಂಗಳಾ, ಭಟನೊಬ್ಬನಾದರೂ ಜೀವಿಸಿರುವ ಸೂಚನೆಯಿಲ್ಲ. ಇಲ್ಲಿ ನಡೆದ ವಿಷಯ ಆ ರಣಹದ್ದಿಗೆ ಮಾತ್ರ ತಿಳಿದಿರಬೇಕು. ಇಲ್ಲಿದ್ದ ಈ ಭಾರಿ ಸೈನ್ಯವನ್ನು ಅವನು ನಾಶಮಾಡಿದನೆಂದರೆ ಅವನಿಗೆ ದುರ್ಗದವರೇ ಯಾರೋ ಸಹಾಯ ಮಾಡಿರಬೇಕು. ಇದರಲ್ಲಿ





ಸಂಶಯವೇ ಇಲ್ಲ.'' ಎಂದ ಗೋರಿ. ಸಿಟ್ಟಿನಿಂದ ಅವನು ಕಟಕಟನೆ ಹಲ್ಲು ಕಡಿದನು.

"ಇರಬಹುದು.'' ಎಂದು ಪಿಂಗಳನು ಸುತ್ತಲೂ ದೃಷ್ಟಿಹಾಯಿಸಿ ಹೀಗೆಂದನು: "ಇನ್ನು ಕಾಲ ವ್ಯರ್ಥಮಾಡಬೇಕೆ? ರಣಹದ್ದನ್ನು ಹಿಂಬಾಲಿಸೋಣ. ಅವನು ಈ ಮರುಭೂಮಿಯಲ್ಲಿ ಎಲ್ಲಿ ಹೋದನೋ ಏನೋ. ನಾವೀಗ ಅವನ ಸುಳಿವು ತಿಳಿದುಕೊಳ್ಳುವ ಬಗೆ ಯಾದರೂ ಹೇಗೆ?''

"ಅದೇನದು ಕ್ಲಿಷ್ಟಸಮಸ್ಯೆಯಲ್ಲ.'' ಎಂದು ಹೇಳುತ್ತ ಹಸನ್ ಗೋರಿ ದುರ್ಗದಾಚೆಗೆ ಬಂದನು. ತರುವಾಯ ಅವನ ಆಜ್ಞೆಯಂತೆ ಐದಾರು ಜನ ಸೈನಿಕರು ಅಷ್ಟುಹೊತ್ತು ಮರುಭೂಮಿಯಲೆಲ್ಲಾ ಹುಡುಕುತ್ತಾ ಓಡಾಡಿ



ಹಿಂತಿರುಗಿ ಬಂದರು. ಮರಳಿನ ಮೇಲೆಬಿದ್ದಿದ್ದ ಒಂಟೆಯ ಹೆಜ್ಜೆಗಳ ಗುರ್ತಿನ ಮೂಲಕ, ಆ ಸೈನಿಕರು ರಣಹದ್ದಿನ ತಂಡದವರು ಹೋಗಿರಬಹುದಾದ ದಿಕ್ಕನ್ನು ಕಂಡುಕೊಂಡು ತಮ್ಮ ನಾಯಕನಿಗೆ ತಿಳಿಸಿದರು.

ಹಸನ್ ಗೋರಿ ಪಿಂಗಳನಿಗೆ ಎರಡು ಮೈಲು ದೂರದಲ್ಲಿದ್ದ ಒಂದು ಪರ್ವತವನ್ನು ತೋರಿಸಿ "ರಣಹದ್ದು ಆ ಬೆಟ್ಟಗುಡ್ಡಗಳ ಪ್ರಾಂತಕ್ಕೆ ಹೊರಟಿದ್ದಾನೆ. ವಿಜಯಗರ್ವದಿಂದ ಅವನೀಗ ವಿನೋದವಿಲಾಸಗಳಲ್ಲಿ ಮುಳುಗಿರಬಹುದು. ಅವನ ಊಹೆಯ ಪ್ರಕಾರ ಆ ದುರ್ಗದ ದ್ವಾರದ ಹಿಂದಿದ್ದ ಸಿಡಿಮದ್ದಿಗೆ ನಾವೆಲ್ಲ ಆಹುತಿಯಾಗಿರಬೇಕಲ್ಲವೇ? ಅವನ ವಿನಾಶಕ್ಕಾಗಿಯೇ ನಾವೀಗ ತಪ್ಪಿ ಉಳಿದಿದ್ದೇವೆ. ಅಲ್ಲವೆ?'' ಎಂದ.

ಪಿಂಗಳನು ಹೌದೆಂದು ತಲೆಯಾಡಿಸಿದನು. ಕೊಂಚ ಹೊತ್ತಿಗೆಲ್ಲಾ ಅಳಿದುಳಿದ ಸೈನಿಕರನ್ನು ಸಂಗಡ ಕರೆದುಕೊಂಡು ಹಸನ್ ಗೋರಿಯೂ ಪಿಂಗಳನೂ ರಣಹದ್ದಿನ ಸಮಾಚಾರಕ್ಕಾಗಿ ಆ ಬೆಟ್ಟದಕಡೆ ಹೊರಟರು.

ಒಂದು ತಾಸಾದ ನಂತರ ಅವರು ಒಂದಾನೊಂದು ಬೆಟ್ಟದಕಣಿವೆಯನ್ನು ಸಮೀಪಿಸಿದರು. ಪಿಂಗಳನು ಇಕ್ಕಡೆಗಳಲ್ಲೂ ನೀಟಾಗಿದ್ದ ಬಂಡೆಗಳನ್ನು ಒಮ್ಮೆ ಕತ್ತೆತ್ತಿ ನೋಡಿ "ಹಸನ್, ಈಗ ಇಲ್ಲಿ ಒಂದು ಉಪಾಯ ಮಾಡುವುದೇ ಒಳ್ಳೆಯದು. ನಾವು ಇಲ್ಲಿ ಎರಡು ತಂಡಗಳಾಗಿ ವಿಭಾಗವಾಗುವುದು



ಉತ್ತಮವೆಂದು ತೋರುತ್ತಿದೆ. ನಮ್ಮ ವಾಹನಗಳನ್ನು ಇಲ್ಲಿಯೇಬಿಟ್ಟು, ಈ ಕಲ್ಲು ಗುಡ್ಡಗಳಲ್ಲಿ, ಗುಹೆಗಳಲ್ಲಿ ಅವನಿರುವ ಸ್ಥಳವನ್ನು ಹುಡುಕೋಣ. ಅವನು ಕಾಣಿಸಿದ್ದೇ ಆದರೆ ಯಾವುದೋ ಸಂಕೇತದ ಮೂಲಕ ಇಬ್ಬರೂ ಒಮ್ಮೆಗೇ ಅವನಮೇಲೆ ಬಿದ್ದು ಧಾಳಿ ನಡೆಸೋಣ.'' ಎಂದ.

ಹಸನ್‌ಗೋರಿ ಹಾಗೇ ಆಗಲೆಂದ. ಪಿಂಗಳನು ಕೆಲವು ಸೈನಿಕರನ್ನು ಸಂಗಡ ಕರೆದುಕೊಂಡು ಕಲ್ಲು ಬಂಡೆಗಳ ಮೇಲೆ ಹತ್ತಿ ಇಳಿದು ರಣಹದ್ದಿಗಾಗಿ ಹುಡುಕಾಡಿದನು. ಕ್ರಮೇಣ ಕತ್ತಲಾಗುತಿತ್ತು.

ಆಗ ಹಠಾತ್ತಾಗಿ ಪಿಂಗಳನಿಗೆ ತಾನಿದ್ದ ಗುಡ್ಡದಕೆಳಗೆ ಏನೋ ಸಪ್ಪಳವಾದುದು ಕೇಳಿಸಿತು. ಅದರೊಂದಿಗೆ ಕೋಲಾಹಲವೂ ಕೇಳಿಸಿತು. ಪಿಂಗಳನು ತನ್ನ ಸೈನಿಕರನ್ನು ಎಚ್ಚರಿಸಿ, ಒಂದು ಎತ್ತರವಾದ ಕಲ್ಲು ಬಂಡೆಯ ಮರೆಯಲ್ಲಿ ನಿಂತು ಕೆಳಗೆ ಬಾಗಿ ಸೂಕ್ಷ್ಮವಾಗಿ ನೋಡಿದನು.

ಸಮತಳವಾಗಿದ್ದ ಪ್ರದೇಶದಲ್ಲಿ ಅನೇಕರು ಆಟಪಾಟಗಳಲ್ಲಿ ತೊಡಗಿದ್ದರು. ಅವರು ಧರಿಸಿದ ಉಡುಪು ಮಾಡುತ್ತಿದ್ದ ರಣಗೊಣಧ್ವನಿ ಕೇಳಿ ಪಿಂಗಳನು ಅವರು ದರೋಡೆಕಾರರೆಂದು ಗ್ರಹಿಸಿದನು. ಕೂಡಲೇ ಪಿಂಗಳನು ಮೊದಲೇ ಏರ್ಪಡಿಸಿಕೊಂಡಂತೆ ಸಂಕೇತ ಸೂಚನೆಯಾಗಿ ಕೊಂಬನ್ನು ಊದಿದನು. ಮರುಕ್ಷಣದಲ್ಲಿ ಕೆಳಗೆ ನಡೆಯುತ್ತಿದ್ದ ನೃತ್ಯ, ಸಂಗೀತ



ಕೋಲಾಹಲವೆಲ್ಲಾ ತಟಕ್ಕನೆ ನಿಂತು ಹೋಯಿತು. ತನ್ನ ಕೊಂಬಿನ ಧ್ವನಿ ಕಳ್ಳರಿಗೂ ಕೇಳಿಸಿತೆಂದು ಪಿಂಗಳನು ಗ್ರಹಿಸಿದನು. ಇನ್ನು ತಡಮಾಡುವುದು ಹಾನಿಕರವೆಂದು ಗೊತ್ತಾಯಿತು. ಆ ಕೂಡಲೇ ಪಿಂಗಳನು ಒಂದು ದೊಡ್ಡ ಬಂಡೆಯನ್ನು ಕೆಳಗಿದ್ದ ಕಳ್ಳರಮೇಲೆ ಉರುಳಿಸಿ, ಅದೇರೀತಿ ಮಾಡುವಂತೆ ತನ್ನ ಸೈನಿಕರಿಗೂ ಆಜ್ಞಾಪಿಸಿದನು.

ಪಿಂಗಳನು ಉರುಳಿಸಿದ ಬಂಡೆ ಕೆಳಗೆ ಬೀಳುವ ಮೊದಲೇ ರೊಂಯ್ಯನೆ ಕೆಲವು ಬಾಣಗಳು ಅವನಿದ್ದ ಬಂಡೆಗೆ ಬಂದು ಬಡಿದುವು. ಪಿಂಗಳನು ಸರಕ್ಕನೆ ಬಂಡೆಯ ಮರೆಗೆ ಹೋಗಿ ಮತ್ತೊಮ್ಮೆ ಎಚ್ಚರಿಕೆಯಿಂದ ಕೆಳಕ್ಕೆ ಬಾಗಿ ನೋಡಿದನು.



ಕೆಲವಾರು ಕಳ್ಳರು ಈಟಿಗಳನ್ನು ಹಿಡಿದು ಕೊಂಡು ಸಿಂಹನಾದ ಮಾಡುತ್ತಾ ಬೆಟ್ಟದ ಮೇಲಕ್ಕೇರಿ ಬರುತ್ತಿರುವರು.

ಅದೇ ಸಮಯದಲ್ಲಿ ಮತ್ತೆ ಕೆಲವು ಬಂಡೆಗಳು ಉರುಳುತ್ತ ಬಂದು ಅವರ ಮೇಲೆರಗಿದುವು. ಅವರೆಲ್ಲ ಚೀತ್ಕಾರಮಾಡುತ್ತಾ ಉರುಳುತ್ತಾ ಅತ್ತಿತ್ತ ಓಡಿದರು.

ತನ್ನ ಸಂಕೇತ ಹಸನ್‌ಗೋರಿಗೆ ಮುಟ್ಟಿ ಕೆಲಸಮಾಡಿಸಿತೆಂದು ತಿಳಿದು ಪಿಂಗಳನು ಸಂತೋಷಗೊಂಡನು.

ಅವನು ತನ್ನ ಸಂಗಡಿಗರೊಂದಿಗೆ ಕಳ್ಳರ ಮೇಲೆ ಬಂಡೆಗಳನ್ನು ಉರುಳಿಸುತ್ತ ಕೆಳಗಿಳಿಯಲಾರಂಭಿಸಿದನು. ಹಸನ್‌ಗೋರಿಯೊಂದಿಗಿದ್ದ ಸೈನಿಕರು ಜಯಕಾರಮಾಡುತ್ತ ಕಲ್ಲುಬೀರುತ್ತ ಕಳ್ಳರತಂಡವಿದ್ದ ಕಡೆಗೆ ಓಡುತ್ತಿದ್ದರು. ಪಿಂಗಳನೂ ಸಹ ತನ್ನ ಸೈನಿಕರನ್ನು ಕರೆದುಕೊಂಡು ಅಲ್ಲಿಗೆ ಸಾಗಿದನು.

ಎರಡು ತಂಡಗಳು ಬೆಟ್ಟದಡಿಯಲ್ಲಿರುವ ಬಯಲುಪ್ರದೇಶವನ್ನು ಸೇರುವವೇಳೆಗೆ ಕಳ್ಳರೆಲ್ಲಾ ದಿಕ್ಕಾಪಾಲಾಗಿ ಪರಾರಿಯಾದರು. ಆದರೆ ಹಿಂದುಳಿದ ಕೆಲವು ಕಳ್ಳರು ತಮ್ಮ ಈಟಿಯಿಂದ ಹಸನ್‌ಗೋರಿಯ ಸೈನಿಕರನ್ನು ತಿವಿದುಕೊಂದರು.

"ಪಿಂಗಳಾ, ಈ ಮುತ್ತಿಕೊಂಡು ಬರುತ್ತಿರುವ ಕತ್ತಲಲ್ಲಿ ಇನ್ನು ನಾವು ಅವರನ್ನು ಬೆನ್ನಟ್ಟುವುದು ಅಸಾಧ್ಯ. ಇಂದು ರಾತ್ರಿ ನಾವಿಲ್ಲೇ ವಿಶ್ರಾಂತಿಪಡೆಯೋಣ. ನಾಳೆ ಮುಂಜಾನೆ ಅವರ ವಿಷಯ ನೋಡಿಕೊಳ್ಳೋಣ" ಎಂದ ಹಸನ್‌ಗೋರಿ. ಪಿಂಗಳನಿಗೆ ಈ ಸಲಹೆ ಉತ್ತಮವಾಗಿ ತೋರಿತು.

ಅವನು ತನ್ನ ಅಂಗೀಕಾರ ಸೂಚಿಸಿ ಅಲ್ಲೊಂದು ಬಂಡೆಯಮೇಲೆ ಕುಳಿತುಕೊಳ್ಳುತ್ತಿರಲು ಒಂದೆಡೆಯಿಂದ,

"ಪಿಂಗಳನು ಯಾರು? ಅವಂತಿ ನಗರದ ಜಾಲರಿ ಪಿಂಗಳನೇ?" ಎಂಬ ಪ್ರಶ್ನೆ ಕೇಳಿ ಬಂತು. "ಯಾರು? ಪದ್ಮಪಾದ!" ಎಂದು ಪಿಂಗಳನು ಆ ಧ್ವನಿ ಬಂದಕಡೆ ತಿರುಗಿ ನೋಡಿದನು. ಎತ್ತರವಾಗಿದ್ದ ಬಂಡೆಯ ಮರೆಯಿಂದ ಪದ್ಮಪಾದನು ನಗುತ್ತಾ ಮುಂದಕ್ಕೆ ಬರುತ್ತಿದ್ದನು. [ ಇನ್ನೂ ಇದೆ ]



# ಕಾಲ - ಸಂಕೇತ

**ಹೊ**ಸಕಾಲವಿದೆ ಮುಂದೆ
ಹಳೆಯ ದಿನಗಳು ಹಿಂದೆ
ನಿಂದಿರುವೆವೀ ಭವ್ಯ ಹೊಸ್ತಿಲಲ್ಲಿ;
ರಂಗೋಲಿ ಸಿಂಗಾರ - ಬಾಗಿಲಲ್ಲಿ!

ಕಳೆದ ವರುಷದ ನಮ್ಮ
ಅನುಭವವ ನೆನೆಯುತಲಿ
ಇರುವ ವರುಷದ ಪ್ರಣಾಳಿಕೆಯಪಿಡಿದೇ,
ಅಡಿಯ ತೆಗೆದಿಡುವ ಧೀರತೆಯಬಿಡದೆ!

ಮುಗಿಲ - ರಂಗುಗಳ - ಮಳೆ -
ಗಾಳಿಗಳ ತಡೆಗಳನು
ಜಗತಿಕುಪಕರಿಸುವೊಲ್ ಮಾಡುತಿಹರು!
ಚಣಗೆಡದೆ ನಡೆವರಾ ರವಿ - ಚಂದ್ರರು!

ಋತುಗಳನು ಅರಳಿಸುತೆ,
ಪಥಬಿಡದೆ ನಡೆಯುವಾ
ಸೂರ್ಯ ಚಂದ್ರರ ನೋಡಿ ಸಾಗುತಿರುವ!
ಮೋಡಮಳೆಗಾಳಿಗಳ ಸ್ವಾಗತಿಸುವಾ!

ಸವಿಯ ಬಯಸುವಹಾಗೆ
ಕಹಿಯನೂ ಬಯಸೋಣ;
ಸವಿ - ಕಹಿಗಳೂ ರಸದ ಸೋದರರಲಾ!
ಸುಖ - ದುಃಖಗಳು ಮನೆಯ ಬಂಧುಗಳಲಾ!

ಕಳೆದ ಬೀಳೇಳುಗಳ
ಕೈಕೋಲ ಬಲವಿಡಿದು,
ಶುಭದರುಶನಕೆ ಮಣಿದು ಮುಂದುವರಿವ!
ಕಾಲಸಂಕೇತವನು ಮರೆಯದಿರುವ!

—"ಸುಂದರಿ"

# ಅಪೂರ್ವವಾದ ಕಾಣಿಕೆ

ಹಠಹಿಡಿದ ತ್ರಿವಿಕ್ರಮನು ಮತ್ತೆ ಮರದ ಬಳಿಗೆ ಹೋಗಿ ಶವವನ್ನು ಕೆಳಗಿಳಿಸಿ ಭುಜದ ಮೇಲೆ ಹಾಕಿಕೊಂಡು ಮೌನದಿಂದ ಶ್ಮಶಾನ ದತ್ತ ನಡೆಯತೊಡಗಿದನು. ಆಗ ಬೇತಾಳ "ಎಲೈ ರಾಜನೇ, ನಿನ್ನಂತಹ ಕಾರ್ಯದೀಕ್ಷೆ ಯುಳ್ಳವರು ಒಮ್ಮೊಮ್ಮೆ ಅತಿ ವಿಚಿತ್ರವಾಗಿ ವ್ಯವಹರಿಸುವುದುಂಟು. ಇದಕ್ಕೆ ಉದಾಹರಣೆ ಶಲ್ಯು. ಆತನ ಕಥೆ ಹೇಳುತ್ತೇನೆ, ಕೇಳು" ಎಂದು ಈ ರೀತಿ ಹೇಳಲಾರಂಭಿಸಿತು.

ಪೂರ್ವಕಾಲದಲ್ಲಿ ಗಾಂಧಾರ ದೇಶದಲ್ಲಿ ಶಲ್ಯು ಎಂಬ ಯುವಕನಿದ್ದನು. ಅವನಿಗೆ ದೇಶ ಸಂಚಾರ ಮಾಡುವ ತೀವ್ರಾಪೇಕ್ಷೆಯಿತ್ತು. ಅವನು ಚಿಕ್ಕಂದಿನಿಂದಲೂ ಬಹಳ ಕಷ್ಟಪಟ್ಟು ದುಡಿದು ಒಂದಿಷ್ಟು ದುಡ್ಡು ಮಾಡಿಕೊಂಡನು. ಒಂದು ದಿನ ತಾಯಿಯೊಂದಿಗೆ "ಅಮ್ಮಾ, ನನಗೆ ಕಾಶಿಗೆ ಹೋಗಿಬರುವ ಅಪೇಕ್ಷೆಯಿದೆ. ಮೂರು ವರ್ಷಗಳಲ್ಲಿ ಹಿಂತಿರುಗಿ ಬಂದುಬಿಡುತ್ತೇನೆ. ನಾನು ಕೂಡಿಟ್ಟಿರುವ ಹಣದಲ್ಲಿ ಅರ್ಧ

---

ಬೇತಾಳ ಕಥೆಗಳು

---

ನಿನಗೆ ಕೊಡುತ್ತೇನೆ. ಅದರಿಂದ ನೀನು ಈ ಮೂರು ವರ್ಷ ಯಾವ ತಾಪತ್ರಯವೂ ಇಲ್ಲದೆ ಕಾಲನೂಕಬಹುದು. ಉಳಿದರ್ಧ ಹಣವನ್ನು ನನ್ನ ಪ್ರಯಾಣಕ್ಕೆ ಉಪಯೋಗಿಸಿಕೊಳ್ಳು ತ್ತೇನೆ. ಹೋಗಲು ಅನುಮತಿಕೊಡು" ಎಂದನು. ಮೊದಲು ಆಕ್ಷೇಪಣೆಮಾಡಿದ ಳಾದರೂ ಕಡೆಗೆ ಆಕೆ ಒಪ್ಪಿಕೊಂಡಳು.

ಉತ್ತಮ ಜಾತಿಯ ಅಶ್ವಗಳಿಗೆ ಗಾಂಧಾರ ದೇಶ ಪ್ರಸಿದ್ಧವಾದುದು. ಅವುಗಳಿಗೆ ವಿಪರೀತ ಹಣ ಕೊಟ್ಟು ಸಿಂಧೂದೇಶವಾಸಿಗಳು ಕೊಂಡುಕೊಳ್ಳುತ್ತಿದ್ದರು. ಆದುದರಿಂದ ಶಲ್ಯ ತನ್ನ ದೇಶದಲ್ಲಿರುವ ಅತ್ಯುತ್ತಮವಾದ ಒಂದು ಕುದುರೆಯನ್ನು ಕೊಂಡುಕೊಂಡು ಅದರ ಮೇಲೇರಿ ಕಾಶಿನಗರಕ್ಕೆ ಪ್ರಯಾಣ ಹೊರಟನು. ಅದನ್ನು ಕಾಶಿರಾಜನಿಗೆ ಬಹುಮಾನ ವಾಗಿ ಅರ್ಪಿಸಿ ಆತನಿಂದ ಪ್ರತಿಬಹುಮಾನ ವನ್ನು ಪಡೆಯಬೇಕೆಂದು ಶಲ್ಯ ಉದ್ದೇಶ. ಅಂತಹ ಬಹುಮಾನ ತನ್ನಬಳಿ ಚಿರಕಾಲ ವಿರುತ್ತದೆ. ಅದನ್ನು ಕುರಿತು ಮುಂದಿನ ಪೀಳಿಗೆಯವರು ಪ್ರಸ್ತಾಪಿಸುತ್ತಿರುತ್ತಾರೆ!

ಶಲ್ಯ ತನ್ನ ಕುದುರೆಯನ್ನು ಅತಿ ಎಚ್ಚರಿಕೆಯಿಂದ ನೋಡಿಕೊಳ್ಳುತ್ತಾ ಬಹಳಕಾಲ ಪ್ರಯಾಣಮಾಡಿ ಕೋಸಲದೇಶವನ್ನು ತಲುಪಿದನು. ಅಲ್ಲಿ ಅವನಿಗೊಂದು ಸತ್ರದಲ್ಲಿ ಸ್ಥಳ ಸಿಕ್ಕಿತು. ಅವನ ಅಶ್ವ ಕೋಸಲದೇಶದ ಪ್ರಜಾ ಸಮುದಾಯವನ್ನೆಲ್ಲಾ ಆಕರ್ಷಿಸಿತು. ಅಂತಹ ಅಶ್ವವನ್ನು ಆ ದೇಶದವರು ಎಂದೂ ಕಂಡಿರ



ಲಿಲ್ಲ. 'ಇಂತಹ ಮೇಲುಜಾತಿಯ ಅಶ್ವ ನಮ್ಮ ಅರಸರಬಳಿಯೂ ಇಲ್ಲ' ಎಂದು ಆಡಿಕೊಳ್ಳ ಲಾರಂಭಿಸಿದರು. ಈ ಸುದ್ದಿ ಶೀಘ್ರದಲ್ಲೇ ಕೋಸಲದೇಶದ ಅರಸನ ಕಿವಿ ಮುಟ್ಟಿತು. ಆತನು ತನ್ನ ಭಟರನ್ನು ಸತ್ರಕ್ಕೆ ಕಳುಹಿಸಿ ಶಲ್ಯ ಮತ್ತು ಅವನ ಕುದುರೆಯನ್ನು ಅರಮನೆಗೆ ಬರಮಾಡಿಕೊಂಡನು.

"ನಿನಗೆ ಈ ಕುದುರೆ ಎಲ್ಲಿ ದೊರೆಯಿತು?" ಎಂದು ರಾಜನು ಶಲ್ಯನನ್ನು ಕೇಳಿದನು.

"ಮಹಾಪ್ರಭೂ, ನಮ್ಮದು ಗಾಂಧಾರ ದೇಶ. ಅಲ್ಲಿ ಇಂಥ ಕುದುರೆಗಳು ಯಥೇಚ್ಛ ವಾಗಿವೆ" ಎಂದ ಶಲ್ಯ.

"ಹಾಗಾದರೆ ಈ ಕುದುರೆಯನ್ನು ನನಗೆ ಮಾರುವೆಯಾ? ನಿನಗೆ ಸಾವಿರ ವರಹಗ

ಳನ್ನು ಕೊಡುವೆನು" ಎಂದು ಹೇಳಿದ ರಾಜ. "ಇದನ್ನು ಮಾರಾಟಮಾಡುವ ಉದ್ದೇಶ ನನಗಿಲ್ಲ, ಮಹಾರಾಜ" ಎಂದ ಶಲ್ಯ ಅತಿ ವಿನಯದಿಂದ.

"ಹೋಗಲಿ, ಎರಡು ಸಾವಿರ ವರಹ ಕೊಡುತ್ತೇನೆ. ನಿನ್ನ ಸ್ವಂತ ಉಪಯೋಗಕ್ಕೆ ಬೇರೊಂದು ಅಶ್ವ ಕೊಡುತ್ತೇನೆ."

"ನೀವು ಎಷ್ಟೇ ಹಣ ಕೊಟ್ಟರೂ ನಾನು ಈ ಅಶ್ವವನ್ನು ಮಾರಲಾರೆ. ಮಹಾಪ್ರಭು" ಎಂದ ಶಲ್ಯ ನಿರ್ಧಾರದಿಂದ.

"ಹಾಗಾದರೆ ನನಗೆ ಬಹುಮಾನವಾಗಿ ಕೊಟ್ಟು ಮರುಬಹುಮಾನ ಪಡೆಯಬಾರದೇಕೆ?" ಎಂದು ರಾಜನು ಕೇಳಿದ. "ನಾನು ಈ ಅಶ್ವವನ್ನು ಬೇರೊಬ್ಬರಿಗೆ ಬಹುಮಾನವಾಗಿ ಕೊಡಲು ಈಮೊದಲೇ ನಿಶ್ಚಯಿಸಿರುವೆನು" ಎಂದು ಶಲ್ಯ ಪ್ರತ್ಯುತ್ತರಕೊಟ್ಟ.

"ಯಾರಿಗೆ?" ಎಂದು ರಾಜ ಕುತೂಹಲದಿಂದ ಕೇಳಿದ.

"ಕಾಶಿದೇಶದ ಅರಸರಿಗೆ" ಮೆಲ್ಲನೆ ನುಡಿದ ಶಲ್ಯ.

ಕೋಸಲಾಧಿಪತಿಯ ಕಣ್ಣುಗಳು ಅವಮಾನ, ಆಗ್ರಹದಿಂದ ಕೆಂಪಾದುವು. "ನಮ್ಮಿಬ್ಬರ ನಡುವೆ ಯುದ್ಧವಾಗುತ್ತಿರುವ ವಿಷಯ ನಿನಗೆ ತಿಳಿಯದೇ? ಇನ್ನು ಆದೇಶಕ್ಕೆ ನೀನು ಜೀವಸಹಿತ ಹೋಗಲಾರೆ. ನಮ್ಮ ಭಟರೋ, ಅಥವಾ ಅವರ ಸೈನಿಕರೋ ನಿನ್ನನ್ನು ಕೊಂದುಬಿಡಬಹುದು" ಎಂದ ರಾಜ. "ಹಾಗಾಗಬೇಕೆಂದು ನನ್ನ ಹಣೆಯಲ್ಲಿ ಬರೆದಿದ್ದರೆ ತಪ್ಪಿಸ



ಲಾದೀತೇ ಮಹಾಪ್ರಭೂ" ಎಂದ ಶಲ್ಯ. ಕೋಸಲದೇಶದ ಅರಸನು ಕೊಂಚಹೊತ್ತು ಯೋಚಿಸಿ "ಸರಿ ನಿನ್ನ ಇಷ್ಟ. ನನ್ನದೇಶ ವನ್ನು ಬಿಡಲು ನಿನಗೆ ಕೆಲವು ರಹಸ್ಯಮಾರ್ಗ ಗಳನ್ನು ಹೇಳುತ್ತೇನೆ. ನೀನು ಸುರಕ್ಷಿತವಾಗಿ ಕಾಶಿರಾಜ್ಯವನ್ನು ಸೇರಿಕೊಂಡಪಕ್ಷಕ್ಕೆ ಸ್ವದೇ ಶಕ್ಕೆ ನೀನು ಹಿಂತಿರುಗುವಾಗ ನನ್ನನ್ನೊಮ್ಮೆ ಭೇಟಿಮಾಡಿ ಹೋಗಬೇಕು. ಕಾಶಿರಾಜನು ನಿನ್ನ ಬಹುಮಾನಕ್ಕೆ ಪ್ರತಿಯಾಗಿ ಯಾವ ಬಹುಮಾನ ಕೊಟ್ಟನೆಂದು ನನಗೆ ತಿಳಿಸ ಬೇಕು. ಆಗ ಬಹುದೇ?" ಎಂದ ರಾಜ.

"ಚಿತ್ತ ಮಹಾಸ್ವಾಮಿ" ವಿನಯಾತಿ ವಿನಯದಿಂದ ನುಡಿದ ಶಲ್ಯ. ಅನಂತರ ಅವನು ಕೋಸಲ ದೇಶದ ಸರಿಹದ್ದನ್ನು ದಾಟಲು ರಾಜನು ಕೊಟ್ಟ ಸೂಚನೆ ತುಂಬಾ ಅನುಕೂಲವಾಯಿತು. ಅವನು ಕೊಂಚ ದಿನ ಗಳಿಗೆಲ್ಲಾ ಕಾಶಿ ನಗರವನ್ನು ಸೇರಿ, ರಾಜ ನನ್ನು ಭೇಟಿ ಮಾಡಿ "ಮಹಾಪ್ರಭೂ, ನಾನು ಗಾಂಧಾರ ದೇಶದಿಂದ ಬಂದಿರುವೆನು. ತಮಗೆ ಕಾಣಿಕೆಯಾಗಿ ಒಂದು ಅಶ್ವವನ್ನು ತಂದಿ ದ್ದೇನೆ. ಅದನ್ನು ಸ್ವೀಕರಿಸಿ ನನ್ನನ್ನು ಕೃತಾ ರ್ಥನನ್ನಾಗಿ ಮಾಡಬೇಕು" ಎಂದ.

ಕಾಶಿರಾಜನು ಪರಮಾನಂದಭರಿತನಾಗಿ ಶಲ್ಯಗೆ ತನ್ನ ಆಸ್ಥಾನದಲ್ಲಿ ಒಂದು ಉದ್ಯೋಗ ಕಲ್ಪಿಸಿಕೊಟ್ಟನು. ಒಂದು ವರ್ಷ ಕಳೆಯಿತು. ಶಲ್ಯರಾಜನಬಳಿಗೆ ಹೋಗಿ "ಮಹಾಪ್ರಭೂ, ನನಗಿನ್ನು ಅಪ್ಪಣೆ ಕೊಡಬೇಕು" ಎಂದು ಕೇಳಿಕೊಂಡ. "ಅದೇನದು? ಆಗಲೇ ನನ್ನ





ಪ್ರೀತಿ ಬೇಸರವಾಗಿಹೋಯಿತೆ?" ಎಂದು ಕೇಳಿದ ರಾಜ ಆಶ್ಚರ್ಯದಿಂದ.

"ಇಲ್ಲ ಪ್ರಭೂ, ಹರಿದ್ವಾರಕ್ಕೆ ಹೋಗುವ ಆಶೆ ಉತ್ಕಟವಾಗಿದೆ" ಎಂದ ಶಲ್ಯು.

"ಹಾಗಾದರೆ ಹೋಗಿ ಬಾ" ಎಂದ ರಾಜ.

ಶಲ್ಯು ಪ್ರಯಾಣಕ್ಕೆ ತಕ್ಕ ವ್ಯವಸ್ಥೆಗಳನ್ನು ಮಾಡಿಸಿದ ರಾಜ. ಆದರೆ ಶಲ್ಯುಗೆ ಈ ಪ್ರಯಾಣ ಅನರ್ಥಕಾರಿಯಾಗಿ ಪರಿಣಮಿಸಿತು. ದಾರಿಯಲ್ಲಿ ಅವನಿಗೆ ಜಡ್ಡಾಗಿ ತುಂಬಾ ಅವಸ್ಥೆಪಟ್ಟನು. ರಾಜನು ಕೊಟ್ಟ ಹಣವೆಲ್ಲಾ ಖರ್ಚಾಗಿಹೋಯಿತು. ಕಾಯಿಲೆಯಿಂದ ಕೃಶನಾಗಿ ಚಿಂದಿ ಬಟ್ಟೆಯನ್ನುಟ್ಟು ಭಿಕಾರಿಯಂತೆ ತಿರುಪೆಬೇಡಿ ಹೊಟ್ಟೆ ಹೊರೆದುಕೊಳ್ಳುತ್ತಾ ಅವನು ಮತ್ತೆ ಕಾಶಿನಗರಕ್ಕೆ ಬಂದನು. ಅರಮನೆಯ ಬಳಿಗೆ ಬರಲು ಯಾರೂ ಅವನ ಗುರುತು ಹಿಡಿಯಲಿಲ್ಲ. ತನ್ನ ಪರಿಚಯ ಹೇಳಿಕೊಳ್ಳಲೂ ಅವನಿಗೆ ನಾಚಿಕೆ. ಈ ಸ್ಥಿತಿಯಲ್ಲಿರಲು ಅತ್ತಕಡೆ ಬರುತ್ತಿದ್ದ ರಾಜನು ಅವನನ್ನು ಕಂಡನು. ಕೂಡಲೇ ಆತನು ಅವನನ್ನು ಗುರುತಿಸಿ, ಅಪ್ಪಿಕೊಂಡು "ಶಲ್ಯು, ಇದೇನು! ಹೀಗೇಕೆ ಕೃಶಾಂಗನಾಗಿರುವೆ? ಈ ಚಿಂದಿ ಬಟ್ಟೆಗಳೇನು?" ಎಂದು ದುಗುಡದಿಂದ ವಿಚಾರಿಸಿದನು.

ನಡೆದ ವಿಷಯವನ್ನೆಲ್ಲಾ ಶಲ್ಯು ಆತನೊಂದಿಗೆ ಹೇಳಿದ. ಈ ಬಾರಿ ರಾಜನು ಅವನಿಗೆ ಆಸ್ಥಾನದಲ್ಲಿ ಉನ್ನತ ಉದ್ಯೋಗವನ್ನು ಕಲ್ಪಿಸಿಕೊಟ್ಟನು. ಅವನು ಸಂಪೂರ್ಣ ಆರೋಗ್ಯಹೊಂದಲು ಔಷಧ ಮತ್ತು ಪ್ರತ್ಯೇಕ ಆಹಾರಪಾನೀಯಗಳ ವ್ಯವಸ್ಥೆ ಮಾಡಿಸಿದನು.

ಮತ್ತೊಂದು ವರ್ಷ ಕಳೆಯಿತು. ಶಲ್ಯು ರಾಜನ ಬಳಿಗೆ ಹೋಗಿ "ಸ್ವಾಮಿ, ಕೃಪೆದೋರಿ ನನಗೆ ಅಪ್ಪಣೆ ಕೊಡಿ" ಎಂದನು.

ರಾಜನು ವಿಸ್ಮಿತನಾಗಿ "ನೌಕರಿ ಬೇಸರವಾಯಿತೆ?" ಎಂದು ಕೇಳಿದನು.

"ಇಲ್ಲ, ಮಹಾಪ್ರಭು, ನನ್ನ ತಾಯಿಗೆ ಮೂರು ವರ್ಷಗಳಲ್ಲಿ ಹಿಂತಿರುಗುವುದಾಗಿ ಮಾತುಕೊಟ್ಟೆ. ಅದನ್ನು ಉಳಿಸಿಕೊಳ್ಳಲು ನಾನು ಹೊರಡಲೇಬೇಕು" ಎಂದ ಶಲ್ಯು.

"ಹಾಗಾದರೆ ನಿನ್ನನ್ನು ತಡೆಯುವುದು ಉಚಿತವಲ್ಲ ಅಗತ್ಯವಾಗಿ ಹೋಗು" ಎಂದ ರಾಜ. ರಾಜನು ಶಲ್ಯುಗೆ ಯಥೇಚ್ಛವಾಗಿ

ಧನ, ಪ್ರಯಾಣಮಾಡಲು ರಥವನ್ನು ಕೊಟ್ಟು ಹೀಗೆಂದನು " ಒಂದುವೇಳೆ ದಾರಿಯಲ್ಲಿ ಇವುಗಳಿಗೆ ಯಾವುದಾದರೂ ಪ್ರಮಾದ ಒದಗಬಹುದು. ಆದುದರಿಂದ ನಿನ್ನ ಬಳಿಯಿರುವಂತೆ ನನ್ನ ಉಂಗುರವನ್ನು ಕೊಡುತ್ತೇನೆ. ಬೆರಳಿಗೆ ಹಾಕಿಕೊಂಡಿರು. ಉದಾರನೂ ಉತ್ತಮನೂ ಆದವರಿಗೆ ಮಾತ್ರ ಇದನ್ನು ಕೊಡು, ಸಾಮಾನ್ಯರಿಗೆ ಕೊಡಬೇಡ."

ಕಾಶಿರಾಜನ ಅಪ್ಪಣೆ ಪಡೆದು ಶಲ್ಯ ಸ್ವದೇಶಕ್ಕೆ ಹೊರಟನು. ದಾರಿಯಲ್ಲಿ ಕೋಸಲ ದೇಶದ ಅರಸನನ್ನು ಭೇಟಿಮಾಡಿದನು.

" ನಿನ್ನ ಕುದುರೆಯನ್ನು ಕಾಶಿರಾಜನಿಗೆ ಕಾಣಿಕೆಯಾಗಿ ಕೊಟ್ಟೆಯಾ? ಆತನು ನಿನಗೆ ಏನು ಕೊಟ್ಟನು?" ಕುತೂಹಲದಿಂದ ಕೇಳಿದ ಕೋಸಲಾಧಿಪತಿ.

" ನನಗೆ ಆಸ್ಥಾನದಲ್ಲಿ ನೌಕರಿಯನ್ನು ದಯಪಾಲಿಸಿದರು " ಎಂದ ಶಲ್ಯ.

" ನಾನೂ ಕೊಡುತ್ತಿದ್ದೆ. ಇನ್ನೇನು ಕೊಟ್ಟರು?" ಎಂದ ಕೋಸಲದರಸ.

" ನನಗೆ ಯಥೇಚ್ಛವಾಗಿ ಹಣವನ್ನು ಕೊಟ್ಟರು. ಪ್ರಯಾಣಕ್ಕೆ ರಥಾಶ್ವಗಳನ್ನು ಕೊಟ್ಟರು" ಎಂದ ಶಲ್ಯ.

" ಅವುಗಳನ್ನು ನಾನೂ ಕೊಡುತ್ತಿದ್ದೆ. ಕಾಲುನಡಿಗೆಯಲ್ಲಿ ಗಾಂಧಾರದೇಶಕ್ಕೆ ನಿನ್ನನ್ನು ಕಳುಹಿಸಿಕೊಡುತ್ತಿದ್ದನೇ? ಮತ್ತೇನು ಬಹುಮಾನಕೊಟ್ಟರು?" ರಾಜ ಕೇಳಿದ.

" ಅಕಸ್ಮಾತ್ತಾಗಿ ಯಾರಾದರೂ ಕಳ್ಳರು ಇವುಗಳನ್ನು ದೋಚಿಕೊಂಡರು ಸಹ ತಮ್ಮ ಜ್ಞಾಪಕಾರ್ಥವಾಗಿ ಉಳಿಯುವಂತೆ ಈ ಉಂಗುರವನ್ನು ಕೊಟ್ಟರು" ಎಂದು ಉಂಗುರವನ್ನು ತೋರಿಸಿದ ಶಲ್ಯ.



" ಭೇಷ್. ಬಹಳ ಸೊಗಸಾಗಿದೆ ನನಗೆ ಆಯೋಚನೆ ಹೊಳೆಯುತ್ತಿರಲಿಲ್ಲ " ಎಂದ ಕೋಸಲದೇಶದ ರಾಜ.

" ಅವರು ನನ್ನೊಂದಿಗೆ ಮತ್ತೊಂದು ಮಾತು ಹೇಳಿದರು, ಮಹಾಪ್ರಭು. ಉದಾರನೂ, ಉತ್ತಮನೂ ಆದ ವ್ಯಕ್ತಿಗೆ ಮಾತ್ರ ಈ ಉಂಗುರವನ್ನು ಕೊಡಬೇಕಂತೆ. ನನ್ನಲ್ಲಿ ಕೃಪೆತೋರಿ ತಾವು ಈ ಉಂಗುರವನ್ನು ಸ್ವೀಕರಿಸಬೇಕು" ಎಂದು ಉಂಗುರವನ್ನು ಬೆರಳಿನಿಂದ ತೆಗೆದು ರಾಜನ

ಮುಂದಿಟ್ಟನು. ಅದನ್ನು ನೋಡಿ ಕೋಸಲಾಧಿಪತಿಯ ಹೃದಯವುಕ್ಕಿತು. ಹರ್ಷೋದ್ಗಾರ ಮಾಡಿ ಶಲ್ಯುವನ್ನು ಗಟ್ಟಿಯಾಗಿ ಅಪ್ಪಿಕೊಂಡನು. ಕೆಲವು ದಿನ ತನ್ನ ಅತಿಥಿಯಾಗಿರಬೇಕೆಂದು ಬಲವಂತಮಾಡಿದನು. ಶಲ್ಯು ಸ್ವದೇಶಕ್ಕೆ ಹೋಗುವಾಗ ಅವನಿಗೆ ಅಪಾರ ಬಹುಮಾನಗಳನ್ನು ಕೊಟ್ಟು ಕಳುಹಿಸಿದನು. ಶಲ್ಯು ಅವುಗಳೊಂದಿಗೆ ತನ್ನ ಮನೆಯನ್ನು ಸೇರಿಕೊಂಡು ತನ್ನ ತಾಯಿಯೊಂದಿಗೆ ಬಹಳ ಕಾಲ ಸುಖವಾಗಿ ಜೀವಿಸಿದನು. ಅಂದಿನಿಂದ ಕೋಸಲ ಮತ್ತು ಕಾಶಿರಾಜ್ಯಗಳ ನಡುವೆ ಯುದ್ಧ ಸಂಭವಿಸಲಿಲ್ಲ.

ಬೇತಾಳ ಈ ಕಥೆ ಹೇಳಿ "ರಾಜನೇ, ಶಲ್ಯು ಹಠಮಾರಿತನದಲ್ಲಿ ಮೂರ್ಖತೆಯೂ ಸೇರಿರುವಂತೆ ತೋರುವುದಿಲ್ಲವೇ? ಕೋಸಲಾಧಿಪತಿಗೆ ಕುದುರೆಕೊಡಲು ನಿರಾಕರಿಸಿದವನು, ತನ್ನ ದೃಷ್ಟಿಯಲ್ಲಿ ಅತ್ಯಂತ ಅಮೌಲ್ಯವಾದ ಅಂಗುಲೀಯಕವನ್ನು ಯಾಕೆ ಕೊಟ್ಟನು? ಕೋಸಲದೇಶದರಸ ಮತ್ತು ಕಾಶಿರಾಜ್ಯದ ಮಧ್ಯೆ ವೈರವಿತ್ತೆಂದು ಗೊತ್ತಿತ್ತಷ್ಟೆ. ಕಾಶಿ ರಾಜನ ಉಂಗುರವನ್ನು ಆತನಿಗೆ ಏಕೆ ಕೊಡಬೇಕಿತ್ತು. ಈ ಪ್ರಶ್ನೆಗೆ ಸಮಾಧಾನ ತಿಳಿದೂ ಹೇಳದಿದ್ದರೆ ನಿನ್ನ ತಲೆ ಸಾವಿರ ಹೋಳಾದೀತು" ಎಂದಿತು.

"ಶಲ್ಯು ಮೂರ್ಖನಲ್ಲ. ಕೋಸಲದೇಶದರಸನು ಉದಾರನೆಂಬ ವಿಷಯ ಶಲ್ಯುಗೆ ಮೊದಲೇ ತಿಳಿದಿತ್ತು. ಉದಾರಿಯಲ್ಲದ ಪಕ್ಷಕ್ಕೆ ಆತನು ಶಲ್ಯುನ ಕುದುರೆಯನ್ನು ಬಲವಂತವಾಗಿ ಕಸಿದುಕೊಳ್ಳುತ್ತಿದ್ದನೇ ಹೊರತು ತನ್ನ ಶತ್ರುವಿಗೆ ಬಹುಮಾನವಾಗಿ ಕೊಂಡೊಯ್ಯುತ್ತಿದ್ದ ವ್ಯಕ್ತಿಗೆ ಗುಪ್ತಮಾರ್ಗವನ್ನು ತಿಳಿಸುತ್ತಿರಲಿಲ್ಲ. ಅಲ್ಲದೆ ಶಲ್ಯು ಈ ಉಂಗುರವನ್ನು ಕೋಸಲಾಧಿಪತಿಗೆ ಕಾಣಿಕೆ ಕೊಟ್ಟು ಇಬ್ಬರು ರಾಜರ ಮೈತ್ರಿ ಸಂಪಾದಿಸಿದನು ಮಾತ್ರವಲ್ಲದೆ, ಅವರಿಬ್ಬರ ನಡುವೆ ಸ್ನೇಹಸಂಬಂಧ ಕಲ್ಪಿಸಿದನು. ಶಲ್ಯು ಮೂರ್ಖನಲ್ಲ, ತುಂಬಾ ವಿವೇಕಿ" ಎಂದು ತ್ರಿವಿಕ್ರಮನು ಜವಾಬಿತ್ತನು.

ರಾಜನಿಗೆ ಈ ರೀತಿ ಮೌನಭಂಗವಾದ ಕೂಡಲೇ ಬೇತಾಳ ಶವದೊಂದಿಗೆ ಮಾಯವಾಗಿ ಮರವೇರಿ ನೇತಾಡಿತು.





# ಅರ್ಧಾಣೆ...

ಒಂದೂರಿನಲ್ಲಿ ರಾಮಯ್ಯ ಎಂಬ ಬಡವನಿದ್ದನು. ಅವನಿಗೆ ಅಂಗೈಯಗಲ ಹೊಲವಾದರೂ ಇರಲಿಲ್ಲ. ಹೇಗಾದರು ಹಣಗಳಿಸಿ ತಾನೂ ಒಬ್ಬ ಬೇಸಾಯಗಾರನಾಗಿ, ಇತರ ರೈತರಂತೆ ಸರಕುಗಳನ್ನು ಸಂತೆಗೆ ತೆಗೆದುಕೊಂಡು ಹೋಗಬೇಕೆಂಬ ತೀವ್ರಾಶೆ ರಾಮಯ್ಯನಲ್ಲಿತ್ತು. ಕೊನೆಗೆ ರಾಮಯ್ಯ ಹೇಗೋ ಸಂತೆಗೆ ಸರಕನ್ನು ತೆಗೆದುಕೊಂಡು ಹೋಗಿ ಮಾರಲು ನಿಶ್ಚಯಿಸಿದನು. ಅವನಬಳಿ ಒಂದು ಮೂಟೆ ಉಣ್ಣೆಮಾತ್ರವಿತ್ತು. ಆ ಪಾಟಿ ಉಣ್ಣೆ ಯಾರಿಗೆ ಬೇಕಾದರೂ ಮಾರಬಹುದಿತ್ತು. ಅದಕ್ಕೆ ಬೆಲೆ ಬರುವುದೂ ಅಷ್ಟರಲ್ಲೇ ಇತ್ತು. ಅದನ್ನು ಸಂತೆಗೆ ಕೊಂಡೊಯ್ಯುವುದು ನಾಚಿಕೆಗೇಡಿನ ಕೆಲಸ. ಆದುದರಿಂದ ರಾಮಯ್ಯ ಒಂದುದಿನ ಅಡವಿಗೆ ಹೋಗಿ ಒಂದು ಗೋಣಿಚೀಲದ ತುಂಬಾ ಜೊಂಡು ತುಂಬಿಕೊಂಡು ಮನೆಗೆ ಬಂದನು. ಉಣ್ಣೆಯನ್ನು ಅದರಮೇಲೆ ಮುಚ್ಚಿ, ಮೂಟೆಯನ್ನು ಹೊತ್ತುಕೊಂಡು ಸಂತೆಗೆ ಹೋದನು.

ಇವನಂತೆಯೇ ಸೋಮಯ್ಯನೆಂಬಾತನೂ ಸಹ ಒಂದು ಮೋಸದ ಗೋಣಿಚೀಲದೊಂದಿಗೆ ಸಂತೆಗೆ ಬಂದನು. ಅವನು ಬೇರೆ ಗ್ರಾಮದವನು. ಅವನ ಚೀಲದ ಮುಕ್ಕಾಲುಭಾಗ ಕುಮಟೆಕಾಯಿ ತುಂಬಿತ್ತು. ಅದರಮೇಲೆ ಅಲ್ಪಸ್ವಲ್ಪಮಾತ್ರ ಅಡಿಕೆಕಾಯಿಗಳನ್ನಿಟ್ಟು ಮುಚ್ಚಿದ್ದನು.

ಸಂತೆಯಲ್ಲಿ ಅಡಿಯಿಡಲು ರಾಮಯ್ಯನಿಗೆ ಧೈರ್ಯವಿಲ್ಲ. ಅಲ್ಲಿ ತರಕಾರಿ ಗುಡ್ಡೆಗುಡ್ಡೆಯಾಗಿ ರಾಶಿ ಹಾಕಿದ್ದರು. ಹಸು, ಕುರಿ, ಮೇಕೆ ಕುದುರೆ ಮುಂದಾದ ರಾಸುಗಳು ನೂರಾರು ಸಂಖ್ಯೆಯಲ್ಲಿ ಮಾರಾಟವಾಗುತ್ತಿವೆ. ಅನೇಕರು ನೂರಾರು ರೂಪಾಯಿ ಬೆಲೆ ಬಾಳುವ ಸರಕುಗಳನ್ನು ತರುತ್ತಿದ್ದಾರೆ.

ಆದುದರಿಂದ ರಾಮಯ್ಯ ಸಂತೆಗೆ ದೂರವಾಗಿ ಒಂದು ಮರದ ಕೆಳಗೆ ತನ್ನ ಮೂಟೆಯನ್ನಿಟ್ಟು ಅಲ್ಲಿ ಕುಳಿತುಕೊಂಡನು. ಸೋಮಯ್ಯನೂ ಅಲ್ಲಿಗೇ ಬಂದನು. ಇಬ್ಬರೂ ತಮ್ಮತಮ್ಮ ಸರಕುಗಳಬಗ್ಗೆ ಪ್ರಸ್ತಾಪ ನಡೆ

ಎಸ್. ಸ್ವಾಮಿನಾಥಶಾಸ್ತ್ರಿ

ಯಿಸಿದರು. ರಾಮಯ್ಯ ತನ್ನ ಚೀಲದಿಂದ ಸ್ವಲ್ಪ ಉಣ್ಣೆ ತೆಗೆದು ತೋರಿಸುತ್ತಾ "ಪಸಂದಾದ ಸರಕು" ಎಂದ. ಸೋಮಯ್ಯ ತನ್ನ ಮೂಟೆಯಿಂದ ಅಡಿಕೆಕಾಯಿ ತೆಗೆದು "ನೋಡಿ, ನಿಂಬೆಕಾಯಿಗಾತ್ರದ ಅಡಿಕೆ" ಎಂದ.

"ಸಂತೆಯಲ್ಲಿ ವ್ಯಾಪಾರ ಬಹಳ ಬಿರುಸಾಗಿ ಸಾಗುತ್ತಿದೆ. ನಮ್ಮ ಮಾಲಿನಕಡೆ ಯಾರೂ ಗಮನಿಸುವಂತೆ ಕಾಣುವುದಿಲ್ಲ. ನಾವು ನಮ್ಮ ಸರಕುಗಳನ್ನು ಅದಲುಬದಲು ಮಾಡಿಕೊಳ್ಳಬಹುದಲ್ಲಾ" ಎಂದ ಸೋಮಯ್ಯ.

"ಏನು, ಉಣ್ಣೆಗೆ ಅಡಿಕೆಕಾಯಿ ವಿನಿಮಯವೇ?" ಎಂದು ಕೇಳಿದ ಆಷಾಢಭೂತಿ ರಾಮಯ್ಯ. "ಅಡಿಕೆಯಾದರೇನು. ಬಂಗಾರದಂತಹ ಸರಕು. ನಿನಗಾಗಿ ಬೇಕಾದರೆ ಒಂದರ್ಧಾಣೆ ಹೆಚ್ಚಿಗೆ ಕೊಡುತ್ತೇನೆ ಬಿಡು" ಎಂದು ಸೋಮಯ್ಯ ಹೇಳಿದ.

ರಾಮಯ್ಯ ಸಂಕೋಚದಿಂದ ಈ ವ್ಯವಸ್ಥೆಗೆ ಒಪ್ಪಿಕೊಂಡನು. ಇಬ್ಬರೂ ಮೂಟೆಗಳನ್ನು ಬದಲಾಯಿಸಿಕೊಂಡರು. "ಹೋಗಿ ಬರ್ತೀನಪ್ಪಾ" ಎಂದು ಸೋಮಯ್ಯ ಹೊರಟು ನಿಂತ. "ನನ್ನ ಅರ್ಧಾಣೆ ಕೊಟ್ಟು ಹೊರಡಯ್ಯಾ" ಎಂದ ರಾಮಯ್ಯ.

"ಲೆಕ್ಕ ಬರೆದುಕೊಳ್ಳಪ್ಪಾ. ಆ ಮೇಲೆ ಕೊಡ್ತೇನೆಬಿಡು. ನಾ ನೆಲ್ಲಿಗೆ ಹೋಗ್ತೇನೆ. ನಮ್ಮದು ನೆರೆಗ್ರಾಮ. ಯಾರನ್ನು ನಮ್ಮ ಮನೆ ಕೇಳಿದರೂ ತೋರಿಸ್ತಾರೆ. ಈಗ ನಾನು ಸಂಗಡ ಹಣ ತರಲಿಲ್ಲ" ಎಂದ ಸೋಮಯ್ಯ. ಮತ್ತೇನೂ ಮಾಡಲಾಗದೆ ರಾಮಯ್ಯ



ಸೋಮಯ್ಯನಿಂದ ತನಗೆ ಅರ್ಧಾಣೆ ಬಾಕಿ ಯಿರುವುದಾಗಿ ಪ್ರಮಾಣ ಮಾಡಿಸಿಕೊಂಡನು. ಇಬ್ಬರೂ ತಮ್ಮ ತಮ್ಮ ಮನೆಗಳಕಡೆ ನಡೆದರು.

ಆ ಮೇಲೆ ತಾವು ಮೋಸ ಹೋದಂತೆ ಇಬ್ಬರಿಗೂ ತಿಳಿಯಿತು. ಆದರೆ ಅರ್ಧಾಣೆ ಯಾದರೂ ಗಿಟ್ಟಿಸಿಕೊಂಡು ಬರುವ ಉದ್ದೇಶ ದಿಂದ ರಾಮಯ್ಯ ಸೋಮಯ್ಯನ ಗ್ರಾಮಕ್ಕೆ ಹೋದನು. ಸೋಮಯ್ಯ ಆ ಊರಿನ ಪಟೇ ಲನಬಳಿ ನೌಕರಿ ಮಾಡುತ್ತಿದ್ದ. ಅವನು ರಾಮಯ್ಯನನ್ನು ಕಂಡಕೂಡಲೇ "ಭಲೇ, ಆಸಾಮಿಕಣಯ್ಯಾ ನೀನು. ನನ್ನ ಮುಳುಗಿಸಿ ಬಿಟ್ಟೆಬಿಡು" ಎಂದ.

"ನೀನುಮಾತ್ರ ನನಗೆ ಟೋಪಿ ಹಾಕ ಲಿಲ್ಲವೇ?" ಎಂದ ರಾಮಯ್ಯ. "ಅದಕ್ಕದು ಸರಿಹೋಯ್ತು ಬಿಡು" ಎಂದ ಸೋಮಯ್ಯ. "ಅದೆಲ್ಲಾ ಆಗೋ ಮಾತಲ್ಲ. ನನಗೆ ನೀನು ಅರ್ಧಾಣೆ ಬಾಕಿ ಬಿದ್ದಿರುವೆ. ಬಾಕಿ ಕೊಟ್ಟು ಬಿಡು" ಎಂದ ರಾಮಯ್ಯ.

"ನನ್ನಹತ್ತಿರ ಒಂದು ಕಿಲುಬುಕಾಸೂ ಇಲ್ಲ. ಆದರೆ ನಾವಿಬ್ಬರೂ ಲಾಭಗಳಿಸುವ ಉಪಾಯ ಒಂದು ಹೇಳುತ್ತೇನೆ, ಕೇಳು. ನಮ್ಮ ಸಾಹುಕಾರರ ಮನೆ ಹಿತ್ತಲಲ್ಲಿ ಒಂದು ಬಾವಿಯಿದೆ. ಒಂದುಸಾರಿ ಸಾಹುಕಾರರು ಏಣಿ ಹಾಕಿಕೊಂಡು ಬಾವಿಗಿಳಿಯುತ್ತಿರುವು ದನ್ನು ನಾನು ಕಂಡೆ. ಬಹುಶಃ ಅದರಲ್ಲಿ ಏನೋ ಬಚ್ಚಿಟ್ಟಿರಬೇಕು. ಇಂದು ರಾತ್ರಿ ನಾವು ಆ ಬಾವಿಯಲ್ಲಿರುವುದನ್ನು ತೆಗೆದು ಕೊಳ್ಳೋಣ." ಎಂದು ಹೇಳಿದ ಸೋಮಯ್ಯ.






ರಾಮಯ್ಯ ಕೊಂಚಹೊತ್ತು ಆಲೋಚಿಸಿ, ಒಪ್ಪಿಕೊಂಡ. ನಿಧಿಯೇನಾದರೂ ದೊರತರೆ ಒಂದಿಷ್ಟು ಜಮೀನು ಕೊಳ್ಳುವ ಆಶೆ ಅವನಿಗೆ.

ಸೋಮಯ್ಯ ಅಂದು ರಾತ್ರಿ ಒಂದು ಗೋಣಿ ಮತ್ತು ಹಗ್ಗವನ್ನು ತಂದ. ಅರ್ಧ ರಾತ್ರಿ ವೇಳೆಯಲ್ಲಿ ಅವರಿಬ್ಬರೂ ಸಾಹುಕಾರನ ಹಿತ್ತಲನ್ನು ಪ್ರವೇಶಿಸಿದರು.

ರಾಮಯ್ಯ ಹಗ್ಗವನ್ನು ಹಿಡಿದುಕೊಂಡ. ಸೋಮಯ್ಯ ಗೋಣಿಯೊಂದಿಗೆ ಹಗ್ಗ ಹಿಡಿದುಕೊಂಡು ಬಾವಿಗೆ ಇಳಿದ. ಅವನೆಷ್ಟು ಹುಡುಕಿದರೂ ಬಾವಿಯಲ್ಲಿ ಮಣ್ಣು ಹೊರತು ಬೇರೇನು ಕಾಣಿಸಲಿಲ್ಲ. "ಈ ರಾಮಯ್ಯ, ಮಹಾಘಟಿಂಗ. ಬಾವಿಯಲ್ಲಿ ಏನೂ ಸಿಕ್ಕಲಿಲ್ಲವೆಂದರೆ ಹಗ್ಗವನ್ನು ಬಾವಿಗೆಸೆದು ಹೊರಟುಬಿಡಬಹುದು. ಆದುದರಿಂದ ನಾನೀಗ ಯುಕ್ತಿಯಿಂದ ಹೊರಬೀಳಬೇಕು." ಎಂದು ಯೋಚಿಸಿ, ಸೋಮಯ್ಯ ಗೋಣಿಚೀಲದಲ್ಲಿ ಕುಳಿತು ಹಗ್ಗಕ್ಕೆ ಅದನ್ನು ಕಟ್ಟಿ "ಹೂಂ, ಮೇಲಿಕ್ಕೆಳೆದುಕೊ" ಎಂದು ಕೂಗಿ ಹೇಳಿದನು. ರಾಮಯ್ಯ ಉತ್ಸಾಹದಿಂದ ಹಗ್ಗವನ್ನು ಎಳೆದುಕೊಂಡನು.

"ಸೋಮಯ್ಯ ನಂಬುವವನಲ್ಲ. ವೃಥಾ ಅವನಿಗೇಕೆ ಇದರಲ್ಲಿ ಭಾಗಕೊಡಬೇಕು. ಅವನು ಭಾವಿಯಲ್ಲೇ ಬಿದ್ದಿರಲಿ" ಎಂದು ಯೋಚಿಸಿ ಆ ಮೂಟೆಯನ್ನು ಹೊತ್ತುಕೊಂಡು ರಾಮಯ್ಯ ನೆಟ್ಟಗೆ ತನ್ನ ಗ್ರಾಮಕ್ಕೆ ಹೊರಟನು. ಕೊಂಚದೂರ ಹೋಗಲು ಮೂಟೆ ಭಾರವಾಗಿ ತೋರಿತು. ಕೂಡಲೇ ಮೂಟೆಯನ್ನು ಕೆಳಗಿಳಿಸಿದನು. ಸೋಮಯ್ಯ ಮೂಟೆ ಬಿಚ್ಚಿಕೊಂಡು ಹೊರಬಿದ್ದನು.

"ದುಷ್ಟ, ಮತ್ತೆ ನನ್ನನ್ನು ಮೋಸಗೊಳಿಸಿದೆಯಾ?" ಎಂದು ರಾಮಯ್ಯ ಅವಡು ಕಚ್ಚಿದ.

"ನೀನೇನು ಮಹಾ ಯೋಗ್ಯನೋ! ನನಗೆಲ್ಲಿ ಅರ್ಧಭಾಗ ಹಣಕೊಡ ಬೇಕೋ ಎಂದು ಯೋಚಿಸಿ ಓಡಿ ಬಂದಿಲ್ಲವೇ ನೀನು? ಅದಕ್ಕಿದು ಸರಿಹೋಯಿತು. ಬಿಡು" ಎಂದ ಸೋಮಯ್ಯ. ಅದೆಲ್ಲಾ ನಡೆಯೋದಿಲ್ಲ. ನಿನ್ನಿಂದ ನನಗೆ ಅರ್ಧಾಣೆ ಬಾಕಿ ಬರಬೇಕು. ಕೊಟ್ಟುಬಿಡು, ಈ ಪಂಚಾಯಿತಿಯೇ ಬೇಡ" ಎಂದ ರಾಮಯ್ಯ. "ನಾನು ಕೊಡುವುದಿಲ್ಲವೆಂದು ಹೇಳಿದೆನೇ? ನನ್ನಬಳಿ ಇದ್ದಾಗ



ಬಂದು ವಸೂಲು ಮಾಡಿಕೊಂಡು ಹೋಗು'' ಎಂದು ಹೇಳಿ ತನ್ನ ಮನೆಯಕಡೆಗೆ ನಡೆದೇ ಬಿಟ್ಟ ಸೋಮಯ್ಯ.

ಕೆಲವು ದಿನಗಳ ನಂತರ ಸೋಮಯ್ಯನಿಗೆ ಮದುವೆ ಆಯಿತು. ಹೆಂಡತಿ ಸ್ವಲ್ಪ ಹಣ ವನ್ನು ತಂದಿದ್ದಳು. ಸೋಮಯ್ಯ ನೌಕರಿ ಯನ್ನು ಬಿಟ್ಟು, ಸ್ವಲ್ಪ ಹೊಲ ಕೊಂಡು ಕೊಂಡು ಬೇಸಾಯ ಮಾಡ ಲಾರಂಬಿಸಿದನು. ಅದರಲ್ಲಿ ಅವನಿಗೆ ಲಾಭ ಬಂತು. ಊರಾಚೆ ಒಂದು ಮನೆಯನ್ನು ಕಟ್ಟಿಸಿದ. ಅವನ ಜೀವನ ಸುಖವಾಗಿ ಸಾಗುತಿತ್ತು.

ರಾಮಯ್ಯ ಮಾತ್ರ ಎಂದಿನಂತೆ ದೇಹ ಶ್ರಮಿಸಿ ಹೊಟ್ಟೆಹೊರೆದುಕೊಳ್ಳುತ್ತಿದ್ದನು. ಅವನಿಗೊಂದು ದಿನ ಸೋಮಯ್ಯನ ಬಾಕಿ ವಿಷಯ ಜ್ಞಾಪಕ್ಕೆ ಬಂತು. ಅದನ್ನು ವಸೂಲು ಮಾಡಲು ಸೋಮಯ್ಯನಿದ್ದ ಗ್ರಾಮಕ್ಕೆ ಹೊರಟುಬಂದನು. ರಾಮಯ್ಯ ಬರುತ್ತಿರು ವುದನ್ನು ಸೋಮಯ್ಯ ತನ್ನ ಪಡಸಾಲೆಯಿಂದ ನೋಡಿದ. ಕೂಡಲೇ ಅವನು ಒಳಕ್ಕೆ ಹೋಗಿ ಹೆಂಡತಿಯೊಂದಿಗೆ "ಲೇ, ಸಾಲಗಾರ ಬರು ತ್ತಿದ್ದಾನೆ. ನಾನು ಹೆಣದಂತೆ ಮಲಗಿ ಕೊಳ್ಳು ತ್ತೇನೆ. ನೀನು ನನ್ನಮೇಲೆ ಬಿದ್ದು ಗೊಳಾಡು ತ್ತಿರು. ಸಾಯಂಕಾಲದವರೆಗೆ ಅಳುತ್ತಿದ್ದರೆ ಈ ರಾಮಯ್ಯನ ಪೀಡೆ ಶಾಶ್ವತವಾಗಿ ತೊಲ ಗುವುದು" ಎಂದು ಹೇಳಿದ.

ಸೋಮಯ್ಯನ ಹೆಂಡತಿ ಹಾಗೆಯೇ ಮಾಡಿ ದಳು. ರಾಮಯ್ಯ ಅಲ್ಲಿಗೆ ಬಂದು ಎಲ್ಲವನ್ನೂ ನೋಡಿದ. ಆದರೆ ಅವನು ಅಲ್ಲಿಂದ ಕಾಲು ತೆಗೆಯಲಿಲ್ಲ. ಪಡಸಾಲೆಯಲ್ಲೇ ಕುಳಿತುಬಿಟ್ಟ.

"ಇನ್ನೂ ಸೋಮಯ್ಯ ಬಾಕಿ ತೀರಿಸುವು ದೆಲ್ಲಿ ಬಂತಪ್ಪಾ. ಸೋಮಯ್ಯನಿಗೆ ಎಲ್ಲ ಋಣ ಗಳೂ ತೀರಿಹೋದುವು." ಎಂದು ಸೋಮ ಯ್ಯನ ಹೆಂಡತಿ ಗೋಳಾಡಿದಳು.

"ತುಂಬಾ ಅನ್ಯಾಯ. ಸೋಮಯ್ಯ ನನಗೆ ತುಂಬಾ ಹಳೆಯಸ್ನೇಹಿತ. ಅವನ ಉತ್ತರ ಕ್ರಿಯೆಗಳನ್ನು ನಡೆಸಿದನಂತರವೇ ನಾನು ಇಲ್ಲಿಂದ ಹೊರಡುತ್ತೇನೆ. ನಾವಿಬ್ಬರೂ ಒಟ್ಟಿಗೆಮಾಡಿದ ವ್ಯವಹಾರಗಳು ಅನೇಕವಿದೆ" ಎಂದ ರಾಮಯ್ಯ.

ಅವನು ಮನೆಯ ಹೊರಗೆನಿಂತು ದಾರಿ ಯಲ್ಲಿ ಹೋಗುತ್ತಿದ್ದವರೊಂದಿಗೆ ಹೆಣ

ಹೊರುವವರಿಗಾಗಿ ಸುದ್ದಿ ಕಳುಹಿಸಿದನು. ಅವರು ಬಂದರು. "ನನ್ನ ಬಂಧುಬಳಗದವರು ಬರುವತನಕ ಶವವನ್ನು ಶ್ಮಶಾನಕ್ಕೆ ತೆಗೆದುಕೊಂಡು ಹೋಗಲು ಸಾಧ್ಯವಿಲ್ಲ," ಎಂದಳು ಸೋಮಯ್ಯನ ಸತೀಮಣಿ.

ಸೂರ್ಯಾಸ್ತಮವಾಯಿತು. ರಾಮಯ್ಯ ಹೋಗಲಿಲ್ಲ. ನೆರೆಹೊರೆಯವರು ಬಂದು ಶವವನ್ನು ಕದಲಿಸಿದಹೊರತು ನಾವು ಇಂದು ಊಟಮಾಡುವಂತಿಲ್ಲ. ಆದುದರಿಂದ ಕೂಡಲೇ ಶವವನ್ನು ಪಾಳುಗುಡಿಗೆ ಸೇರಿಸಿ" ಎಂದು ಒತ್ತಾಯಮಾಡಿದರು.

"ಶವವನ್ನು ನೋಡಿಕೊಳ್ಳುವವರು ಯಾರು? ಆ ಪಾಳುಗುಡಿಯಲ್ಲಿ ಒಬ್ಬೊಂಟಿಗಳಾಗಿ ಶವದೊಂದಿಗೆ ನಾನಿರಲಾರೆ" ಎಂದಳು ಸೋಮಯ್ಯನ ಮಡದಿ. "ಅದಕ್ಕೇಕೆ ಚಿಂತಿಸುವೆ ತಂಗಿ. ನನ್ನ ಆಪ್ತಮಿತ್ರನ ಶವವನ್ನು ಜೋಪಾನವಾಗಿ ನಾನು ನೋಡಿಕೊಳ್ಳುತ್ತೇನೆ," ಎಂದ ರಾಮಯ್ಯ.

ಸೋಮಯ್ಯನ ಹೆಂಡತಿ ರಹಸ್ಯವಾಗಿ ಗಂಡನೊಂದಿಗೆ "ಈಗೇನು ಮಾಡಲಿ?" ಎಂದಳು. "ಗುಡಿಗೆ ತೆಗೆದುಕೊಂಡು ಹೋಗಲಿ, ಭಯವಿಲ್ಲ" ಎಂದ ಸೋಮಯ್ಯ.

ಶವವಾಹಕರು ಹೆಣವನ್ನು ಗುಡಿಗೆ ಸೇರಿಸಿದರು. ರಾಮಯ್ಯ ಶವ ಜಾಗರಮಾಡಲು ಪ್ರಾರಂಭಿಸಿದನು. ಅರ್ಧರಾತ್ರಿಯಾಯಿತು. ಗುಡಿಯ ಹೊರಗೆ ಮನುಷ್ಯರ ಸಪ್ಪಳವಾಯಿತು. ರಾಮಯ್ಯ ಸರಕ್ಕನೆ ಗರ್ಭಗುಡಿಯಲ್ಲಿ ಸೇರಿಕೊಂಡನು. ಕೊಂಚಹೊತ್ತಿಗೆಲ್ಲಾ



ನಾಲ್ವರು ಕಳ್ಳರು ಗುಡಿಯನ್ನು ಪ್ರವೇಶಿಸಿದರು. ಅವರು ಒಂದು ಮೂಟೆಯನ್ನು ಕೆಳಗಿಳಿಸಿದರು. ಅದರಲ್ಲಿದ್ದ ನಗನಾಣ್ಯಗಳನ್ನು ನಾಲ್ಕು ಭಾಗ ಮಾಡಿದರು. ಹಂಚಬೇಕಾದ ವಸ್ತುಗಳಲ್ಲಿ ಒಂದು ಖಡ್ಗವಿತ್ತು.

"ಇದನ್ನು ಯಾರು ತೆಗೆದುಕೊಳ್ಳುವಿರಿ" ಎಂದು ಕಳ್ಳರ ನಾಯಕನು ಕೇಳಿದನು. ಕಳ್ಳರು "ಅದು ಕೆಲಸಕ್ಕೆಬಾರದ ವಸ್ತು" ಎಂದರು. "ಹಾಗಲ್ಲ. ಇದೊಂದು ಉಪಯುಕ್ತವಾದ ವಸ್ತು. ಬೇಕಾದರೆ ಒಂದೇ ಏಟಿಗೆ ಈ ಶವವನ್ನು ಎರಡು ತುಂಡಾಗಿ ಮಾಡಿ ತೋರಿಸುತ್ತೇನೆ" ಎಂದು ಹೇಳುತ್ತಾ ನಾಯಕನು ಕತ್ತಿ ಹಿರಿದು ಸೋಮಯ್ಯನನ್ನು ಸಮೀಪಿಸಿದನು. ತಕ್ಷಣ ಸೋಮಯ್ಯನು ಎದ್ದು ಕುಳಿತು "ಎಲೈ ಭೂತಗಳೇ, ನೀವೆಲ್ಲಿರುವಿರಿ?" ಎಂದು ಗಟ್ಟಿಯಾಗಿ ಅರಚಿದನು. ಕೂಡಲೇ ಮಂತ್ರ ಹಾಕಿದಂತೆ ಕಳ್ಳರು ಕಂಬಿಕಿತ್ತರು. ಈ ವಿಷಯ ತಿಳಿದು ರಾಮಯ್ಯ ಹೊರಗೆ ಬಂದನು.

"ನೋಡಿದೆಯಾ ನಮ್ಮ ಹಂಚಿಕೆ ಫಲಿಸಿತು. ಇದೆಲ್ಲವನ್ನೂ ನಾವು ಹಂಚಿಕೊಳ್ಳೋಣ" ಎಂದೆನ್ನುತ್ತಾ ಕಳ್ಳರು ದೋಚಿತಂದ ಸ್ವತ್ತನ್ನೆಲ್ಲಾ ಸರಿಸಮನಾಗಿ ಹಂಚಿದ ಸೋಮಯ್ಯ. "ಭೇಷ್. ಸರಿ, ಈಗ ನನ್ನ ಅರ್ಧಾಣೆ ಮಾತೇನು?" ಎಂದು ರಾಮಯ್ಯ ಕೇಳಿದ. ಸರಿ ಅವರಿಬ್ಬರನಡುವೆ ಅರ್ಧಾಣೆಗಾಗಿ ಹೊಡೆದಾಟ ಪ್ರಾರಂಭವಾಯಿತು. ಇಷ್ಟರಲ್ಲಿ ಕಳ್ಳರು ಬಹಳದೂರ ಓಡಿ



ಹೋಗಿ ಒಂದುಕಡೆ ನಿಂತರು. ಕಳ್ಳರ ನಾಯಕನು ತನ್ನ ಅನುಚರರೊಂದಿಗೆ "ನಾವಿಂದು ಬಹಳ ತಿಳಿಗೇಡಿತನದ ಕಾರ್ಯಮಾಡಿದೆವು. ಮಹಾಮಹಾ ಯೋಧರಿಗೇ ಭಯಪಡದ ನಾವು ಹೆದರಿಕೊಂಡು ಸಂಪತ್ತನ್ನೆಲ್ಲಾ ತೊರೆದು ಓಡಿಬಂದೆವು. ನಮ್ಮಲ್ಲಿ ಎದೆಗಾರನು ಯಾರಾದರೂ ಇದ್ದರೆ ಗುಡಿಗೆ ಹೋಗಿ ಅಲ್ಲಿ ಏನು ನಡೆಯುತ್ತಿರುವುದೋ ತಿಳಿದುಕೊಂಡು ಬರಲಿ" ಎಂದನು.

ಗುಡಿಗೆ ಹೋಗಲು ಎಲ್ಲರೂ ನಿರಾಕರಿಸಿದರು. ನಾಯಕನೇ ಜೀವವನ್ನು ಬಿಗಿಹಿಡಿದುಕೊಂಡು ದೇಗುಲವನ್ನು ಸಮೀಪಿಸಿದನು.

"ನನ್ನ ಅರ್ಧಾಣೆ ವಿಷಯವೇನು?" ಎಂದು ರಾಮಯ್ಯ ಕೂಗುತ್ತಿದ್ದ. "ನಿನ್ನ ಅರ್ಧಾಣೆ ನಿನಗೆ ಆಗಲೇ ಸೇರಿದೆ. ನಡಿ" ಎಂದು ಸೋಮಯ್ಯ ಅರಚುತ್ತಿದ್ದ. ಈ ಕೂಗಾಟವನ್ನು ಕೇಳಿದ ಕಳ್ಳರ ನಾಯಕನ ಮೈ ಬೆವತುಹೋಯಿತು. ಅವನು ಅಲ್ಲಿಂದ ಕಂಬಿಕಿತ್ತು ತನ್ನ ಸಂಗಡಿಗರನ್ನು ಸೇರಿಕೊಂಡನು.

"ಅಮ್ಮಮ್ಮ, ಆ ಗುಡಿಯಲ್ಲಿ ಎಷ್ಟಾರೆ ಭೂತಗಳಿವೆಯೋ ನಾನು ಊಹಿಸಲಾರೆ. ನಾವು ದೋಚಿದ್ದ ಹಣವನ್ನೆಲ್ಲಾ ತಲಾ ಅರ್ಧಾಣೆಯಂತೆ ಹಂಚಿರಬೇಕು, ಅದೂ ಎಲ್ಲ ಭೂತಗಳಿಗೂ ಸರಿಯಾಗಿ ಬಂದಂತೆ ತೋರದು. ಇಂದು ನಾವೆದ್ದ ಗಳಿಗೆ ಒಳ್ಳೆಯದು. ನಡೆಯಿರಿ ಮನೆಗಳಿಗೆ ಹೋಗುವ. ಜೀವಿಸಿದ್ದರೆ ಸೊಪ್ಪುತಿಂದಾದರೂ ಬಾಳಬಹುದು" ಎಂದು ಹೇಳಿದ. ಕಳ್ಳರೆಲ್ಲ ತಮ್ಮ ತಮ್ಮ ಮನೆಗಳಿಗೆ ಹೊರಟುಹೋದರು.

ಬಹಳಹೊತ್ತು ವಾದವಿವಾದಗಳಾದ ಮೇಲೆ ರಾಮಯ್ಯ ಸೋಮಯ್ಯ ಒಂದು ಒಪ್ಪಂದಕ್ಕೆ ಬಂದರು. ಅರ್ಧಾಣೆಗೆ ಬದಲಾಗಿ ರಾಮಯ್ಯ ಕಳ್ಳರು ಬಿಟ್ಟುಹೋಗಿದ್ದ ಖಡ್ಗವನ್ನು ತೆಗೆದುಕೊಂಡನು. ತರುವಾಯ ರಾಮಯ್ಯ ತನ್ನ ಪಾಲಿಗೆ ಬಂದ ಹಣದೊಂದಿಗೆ ಸ್ವಗ್ರಾಮಕ್ಕೆ ತೆರಳಿ ಹೊಲವನ್ನು ಕೊಂಡು, ಮದುವೆಯಾಗಿ ಸಂಸಾರ ಮಾಡಿಕೊಂಡಿದ್ದನು. ಸಂತೆಗೆ ಸರಕುಗಳನ್ನೊಯ್ಯಬೇಕೆಂಬ ಅವನ ಹಾರೈಕೆ ಫಲಿಸಿತು.





# ಮಿತ್ರಲಾಭ

ವಣಿಕ ಯುವಕನ ಮಾತ
ಕೇಳಿ ದೊರೆಮಗಳು
ಇವನಲ್ಲ ತನ್ನಿನಿಯ
ನೆಂದು ಗ್ರಹಿಸಿದಳು;
ಸಖಿಯಿಂದೆ ಆತನನು
ಬೀದಿಗಿಳಿಸಿದಳು.
ಮತ್ತೆ ಸಾಗಿದನಾತ
ಬೀದಿ ಬೀದಿಯೊಳು.
ಒಂದು ಮಂಟಪ ಕಂಡು,
ಆ ಕತ್ತಲೆಯೊಳು
ಮಲಗಲೆಳಸಿದನಲ್ಲಿ,
ಚೆಲುವೆಯೋರುವಳು
ತನ್ನಿನಿಯನೆಂದವನ
ಬದಿಯೆ ಮಲಗಿದಳು.
ಬೆಳಗಾತ ನಿಜವರಿತು
ಬೈದು ಕಳಿಸಿದಳು.
ಇರುಳವಳ ಪರಿಕಂಡ
ಅವಳ ಪ್ರಿಯನವಳು

ದುರುಳೆ ಎನ್ನುತೆ ಜರೆದು
ತೊರೆದನಳಲವಳು.
ಮುಂದೆ ಬಂದಿತು ಮದುವೆ
ರಾಜನಂದಿನಿಗೆ;
ಅಂದವಳು ದೇವಳಕೆ
ಹೊರಡೆ ಮೆರೆವಣಿಗೆ;
ವರನಾನೆ ಮದದಿಂದೆ
ಧಾವಿಸಿತು ಸುತ್ತೂ!
ಕನ್ಯೆಯನು ಬಿಟ್ಟೆಲ್ಲ
ರೋಡೆ ಕಾಲ್ಕಿತ್ತು.
ಆ ಕಡೆಗೆ ಬಂದ ನ
ಮ್ಮಾ ವಣಿಕ ಯುವಕ
ಆಧಾರಗೆಟ್ಟ ಕ
ನ್ಯೆಗೆ ತಾಳಿ ಮರುಕ,
ಧೈರ್ಯದಿಂದವಳ ಕೈ
ಪಿಡಿದು ನಡೆಸಿದನು;
ಅವಳವನ ಮೇಲ್ವಾಗಿ
ನಡೆಯುತಿರಲಿದನು

ಮಾರಂಗ



ಜನರೆಲ್ಲ ಕಂಡು ರಾ
ಜನಿಗೆ ಅರುಹಿದರು,
ವರನ ಮದ್ದಾನೆ ಮ
ರ್ದಿಸಿತೆಂದೊರೆದರು.
ರಾಜಕುವರಿಯು ಕೇಳಿ
'ಎನ್ನ ಕಷ್ಟದಲಿ
ಕೈಪಿಡಿದನಿವನೆ ಪತಿ'
ಎಂದಳಿಷ್ಟದಲಿ.
ಅಂತೆಯೇ ರಾಜನಾ
ವಣಿಕ ಕುವರನಿಗೇ
ಯುವರಾಜಗೊಳಿಸಿ
ಕುವರಿಯನಿತ್ತ ಕಡೆಗೆ.
ಮಂಟಪದಿ ಅಳುವವಳ

ನವನೆ ವರಿಸಿದನು.
ವಿಧಿಕೊಟ್ಟಿತಿಂತವಗೆ
ಪತ್ನೀದ್ವಯವನು!
ಅದರಿಂದೆ ಮಿತ್ರರೇ
ತನ ಪ್ರಾಪ್ತಿ ತನಗೇ
ತಪ್ಪದೆಂಬಾ ವಿಧಿಯೆ
ನಿಜವಹುದು ಕಡೆಗೆ!
ಇದನರಿತು ನಾನ್ ಮನವ
ಬಿಗಿ ಗೊಳಿಸಿಕೊಂಡೆ.
ಮತ್ತಿಲ್ಲಿ ಬಂದು ಸ
ನ್ಮಿತ್ರರನು ಕಂಡೆ''
ಮಂದರಕನೀ ಹಿರ
ಣ್ಯಕನೆಂದ ಕಥೆಗೆ
ಮೋದಗೊಂಡೆಂದ "ನೆಲೆ
ಗೆಳೆಯ, ನಮ್ಮೊಳಗೆ
ಭೇದವಿಲ್ಲವು ಇನ್ನು.
ನೀನು ಬಲುಸುಗುಣ!
ಮಧುರ ಮಾತಿನ ಮಲ್ಲ
ವಿದ್ಯಾಪ್ರವೀಣ!
ಸ್ನೇಹಕ್ಕೆ ಮಿಗಿಲಾದ
ಧನವು ಬೇರುಂಟೆ!
ಸ್ನೇಹಿತರ ಗಳಿಪವಗೆ
ಪರದೇಶವುಂಟೆ!
ಧನವಿಲ್ಲವೆಂದು ನೀ
ಚಿಂತೆಪಡ ಬೇಡ.



ಧನವನನುಭವಿಸಲಿಕೆ
ವಿಧಿಬೇಕು ನೋಡಾ!
ಧನವಿದ್ದು ಅನುಭವಿಸ
ಲಾಗದುದಕೊಂದು
ಕಥೆಯುಂಟು ಪೇಳುವೆನು
ಕೇಳಿ ಮನದಂದು.
ಸೋಮಿಲಕನೆಂಬ ಜಾ
ಡನು ಹಿಂದೆ ಇದ್ದ.
ಬಲು ಜಾಣತನದಿ
ಬಟ್ಟೆಯ ನೇಯುತಿದ್ದ.
ನಯವಾದ ಮಿದುವಾದ
ಜರಿಯ ವಸ್ತ್ರಗಳ
ನೇಯುತಿದ್ದನು ಮೇಲು
ತರದ ಜವುಳಿಗಳ.
ಧನವೆಷ್ಟು ಬಂದರೂ
ಕೈಲುಳಿವುದಿಲ್ಲಾ.
ಸಿಕ್ಕಿದಷ್ಟೂ ಖರ್ಚು;
ನಾಳೆಗೇನಿಲ್ಲ.
ಕಂಡಿದನು ಅವನೊಂದು
ದಿನ ಮಡದಿಯೊಡನೆ
'ಕಂಡೆಯಾ ಹಣವುಳಿವು
ದಿಲ್ಲ ನಮ್ಮೊಡನೆ.
ಕೆಲಸ ಜಾಣ್ಮನವೆಲ್ಲ
ಇದ್ದು ಈ ಗತಿಯೆ?
ಪೋಗಿ ಬರುತ್ತೆನೆ ಸಾ
ಕಷ್ಟು ಹಣ ಜತೆಯೆ!
ಎನಲು ನುಡಿದಳು ಮಡದಿ
'ಬೇಡ, ಇದು ಸಾಕು.
ತಿರುಗಬೇಡಿರಿ ಬರಿದೆ
ತೃಪ್ತಿಯಿರಬೇಕು!
ಅದಕೆಂದ: "ಹಾಗಲ್ಲ.
ನೀನೋಡುತಿರೆಲೇ'
ಬದುಕು ಬೆಳಗಲು ತುಂಬ
ಧನವ ತರುವೆನೆಲೇ."
ಎಂದವಳ ಬಾಯ್‌ಬಿಗಿದು
ನಡೆದು ಸೋಮಿಲನು
ಸೇರಿಕೊಂಡನು ವರ್ಧ
ಮಾನ ನಗರವನು.



# ಅಲೀನೂರ್

ಒಂದಾನೊಂದು ಕಾಲದಲ್ಲಿ ಬಸ್ರಾನಗರಕ್ಕೆ ಮಹಮದ್ ಇಬನ್ ಸುಲೇಮಾನ್ ಸುಲ್ತಾನನಾಗಿದ್ದನು. ಬಾಗದಾದಿನ ಖಲೀಫ ಹರೂನ್ ಅಲ್‌ರಷೀದ್‌ರ ಸಾಮಂತರಾಜರಲ್ಲಿ ಸುಲೇಮಾನ್ ಒಬ್ಬ. ಈ ಸುಲ್ತಾನನಬಳಿ ಈರ್ವರು ವಜೀರರಿದ್ದರು. ಅವರಲ್ಲಿ ವಜೀರ್ ಅಲ್ ಫದಲ್ ತುಂಬಾ ಉತ್ತಮನು. ವಜೀರ್ ಅಲ್‌ಮುಯಿಸ್‌ಸಾವಿ ಎಂಬಾತನು ನೀಚ ಮತ್ತು ಕ್ರೂರಿ. ಆದುದರಿಂದ ಪ್ರಜೆಗಳಿಗೆ ಅಲ್‌ಫದಲ್ ಎಂದರೆ ತುಂಬಾ ಅಭಿಮಾನ, ಸಾವಿ ಎಂದರೆ ವಿಪರೀತ ಭಯ.

ನಾನಾದೇಶಗಳಿಂದ ಹೆಣ್ಣುಗುಲಾಮರನ್ನು ತಂದು ಬಸ್ರಾ ನಗರದಲ್ಲಿ ಮಾರಾಟಮಾಡಲಿರುವರೆಂದು ಸುಲ್ತಾನನ ಕಿವಿಗೆ ಬಿದ್ದಿತು. ಆತನು ತನ್ನ ಮುಖ್ಯ ವಜೀರ್ ಅಲ್‌ಫದಲನನ್ನು ಕರೆದು "ಮಾರಾಟಕ್ಕಿರುವ ಗುಲಾಮರಲ್ಲಿ ಅತ್ಯಂತ ಚೆಲುವೆಯನ್ನು ಹತ್ತು ಸಾವಿರ ದೀನಾರಗಳನ್ನಾದರೂ ಕೊಟ್ಟು ನನಗೆ ತಂದು ಕೊಡು" ಎಂದು ಆಜ್ಞಾಪಿಸಿದನು. ಕೂಡಲೇ ಅಲ್‌ಫದಲ್ ಪೇಟೆಗೆ ಹೋಗಿ ಸುಲ್ತಾನನ ಅಂತಸ್ತಿಗೆತಕ್ಕ ಗುಲಾಮಳಿಗಾಗಿ ವಿಚಾರಿಸಿದನು. ಸಾವಿರ ದೀನಾರಗಳಿಗೂ ಹೆಚ್ಚು ಬೆಲೆಯ ಗುಲಾಮರನ್ನು ತಾನೇ ಸ್ವತಃ ನೋಡಿದನು. ಆದರೆ ಅವರು ಯಾರೂ ಅಲ್ ಫದಲ್‌ಗೆ ಒಪ್ಪಿಗೆಯಾಗಲಿಲ್ಲ.

ಸುಲ್ತಾನನು ಒಂದು ತಿಂಗಳ ಅವಧಿಯನ್ನು ಕೊಟ್ಟಿದ್ದನು. ಆ ಅವಧಿ ಮುಗಿಯಿತು. ವಜೀರನು ಅಲ್ಲಿಗೆ ಸುಮಾರು ಸಾವಿರ ಜನ ಗುಲಾಮರನ್ನು ಸ್ವತಃ ನೋಡಿದ್ದನು. ಆದರೂ ಪ್ರಯೋಜನವಾಗಲಿಲ್ಲ.

ಕಾಲಾವಧಿಯನ್ನುಹೆಚ್ಚಿಸುವಂತೆ ಸುಲ್ತಾನನನ್ನು ಪ್ರಾರ್ಥಿಸುವಸಲುವಾಗಿ ಅಲ್‌ಫದಲ್ ಕುದುರೆ ಏರಿ ಅರಮನೆಗೆ ಹೊರಟಿರುವಾಗ ಒಬ್ಬ ವರ್ತಕನು ಬಂದು "ಅಯ್ಯಾ, ತಮ್ಮ ಅಭಿರುಚಿಗೆತಕ್ಕ ಅಪೂರ್ವ ಸುಂದರಿಯೊಬ್ಬಳು ಮಾರಾಟಕ್ಕಿರುವಳು" ಎಂದನು.

"ಹಾಗಾದರೆ ಆಕೆಯನ್ನು ಕರೆದುಕೊಂಡು ಬಾ" ಎಂದು ಹೇಳಿ ಫದಲ್ ಕುದುರೆಯಿಂ

ಎಸ್. ಪಿ. ಕುಮಾರಿ

ದಿಳಿದು ಮತ್ತೆ ಮನೆಯೊಳಕ್ಕೆ ಬಂದುಬಿಟ್ಟನು. ಒಂದು ಗಂಟೆಯನಂತರ ಒಬ್ಬ ಹುಡುಗಿ ಯೊಂದಿಗೆ ಆ ವರ್ತಕನು ಫದಲ್ ಮನೆ ಯನ್ನು ಪ್ರವೇಶಿಸಿದನು. ಫದಲ್ ಆಕೆಯನ್ನು ಕಂಡು ಆನಂದಗೊಂಡನು. ಆಕೆ ನಿಜವಾಗಿ ಅಪೂರ್ವ ಲಾವಣ್ಯವತಿ. ಹೆಸರು ಅನಿಸ್ ಆಲ್‌ಜಲಿಸ್. ಹಾಗೆಂದರೆ 'ಪ್ರಿಯಸಖಿ' ಎಂದರ್ಥ. ಆಕೆ ಸುಂದರಿಯಷ್ಟೇ ಅಲ್ಲ; ವಿದ್ಯಾವತಿಯೂ ಆಗಿದ್ದಳು.

ವಜೀರ್ ಆಲ್‌ಫದಲ್ ಆಕೆಯನ್ನು ಅರ ಸನಿಗಾಗಿ ಕೊಳ್ಳಲು ನಿರ್ಧರಿಸಿದನು. "ಈ ಗುಲಾಮಳಿಗೆ ಹತ್ತು ಸಾವಿರ ದೀನಾರಗಳನ್ನು ಕೊಡುತ್ತೇನೆ. ನನ್ನ ಸ್ವಂತಕ್ಕಾಗಿ ಈಕೆ ಯನ್ನು ಕೊಂಡುಕೊಳ್ಳುತ್ತಿಲ್ಲ. ಸುಲ್ತಾನರಿ ಗಾಗಿ ಕೇಳುತ್ತಿದ್ದೇನೆ. ಹತ್ತು ಸಾವಿರದ ವರೆವಿಗೆ ಕೊಡಲು ನನಗೆ ಅನುಮತಿ ನೀಡಿರು ವರು" ಎಂದ.

"ಸುಲ್ತಾನರಿಗಾದರೆ ತಾವು ಏನು ಕೊಟ್ಟರೂ ತೆಗೆದುಕೊಳ್ಳುತ್ತೇನೆ. ಆದರೆ ಒಂದು ಕೋರಿಕೆಯನ್ನು ತಾವು ನಡಿಸಿಕೊಡ ಬೇಕು. ಈ ಹುಡುಗಿ ಬಹುದೂರ ಪ್ರಯಾಣ ಮಾಡಿ ಇಂದೇ ಬಸ್ರಾ ನಗರವನ್ನು ತಲು ಪಿರುವಳು. ಹವಾ ಮತ್ತು ನೀರಿನ ಬದ ಲಾವಣೆಯಾಗಿದೆ. ಹತ್ತು ದಿನ ಈಕೆಗೆ ಸಂಪೂರ್ಣ ವಿಶ್ರಾಂತಿ ಬೇಕು. ತದನಂತರ ಸುಲ್ತಾನರಿಗೆ ಒಪ್ಪಿಸಬೇಕೆಂದು ನನ್ನ ಮನವಿ" ಎಂದ ವರ್ತಕ.



ವಜೀರ್ ಫದಲ್ ಒಪ್ಪಿದ. ಆತನು ಪ್ರಿಯ ಸಖಿಯನ್ನು ತನ್ನ ಹೆಂಡತಿಗೆ ಒಪ್ಪಿಸಿ, "ಈ ಹುಡುಗಿ ಸುಲ್ತಾನರ ದಾಸಿ. ಹತ್ತು ದಿನ ನಮ್ಮ ಮನೆಯಲ್ಲಿರುತ್ತಾಳೆ. ಈ ಹತ್ತು ದಿನ ಇವಳು ನಮ್ಮ ಹುಡುಗ ಅಲಿನೂರನ ಕಣ್ಣಿಗೆ ಬೀಳದಂತೆ ನೋಡಿಕೊಳ್ಳುವ ಭಾರ ನಿನ್ನದು. ಹುಷಾರ್" ಎಂದನು.

ಆಲ್‌ಫದಲ್‌ನ ಮಗ ಅಲೀನೂರ್ ಒಬ್ಬ ಸುಂದರ ತರುಣ. ಒಳ್ಳೆಯವನೇ ಆದರೂ ತುಂಬಾ ಉದ್ರೇಕಸ್ವಭಾವದವನು. ಪ್ರಿಯ ಸಖಿಯನ್ನು ಕಂಡರೆ ತಕ್ಷಣ ಅವಳನ್ನು ಮೋಹಿಸುವನು. ಕ್ಷಣಮಾತ್ರದಲ್ಲಿ ಅವಳನ್ನು ತನ್ನ ಬಲೆಗೆ ಹಾಕಿಕೊಳ್ಳುತ್ತಾನೆ. ಒಂದು ವೇಳೆ ಹಾಗೇನಾದರೂ ಆದರೆ ಸುಲ್ತಾನನ

ಬಳಿ ವಜೀರನ ಗೌರವಮರ್ಯಾದೆಗಳು ಮಣ್ಣುಪಾಲಾಗುತ್ತದೆ. ಈ ವಿಷಯ ವಜೀರನ ಪತ್ನಿಗೆ ತಿಳಿದಿತ್ತು. ಅಂತಲೇ ಆಕೆ ಪ್ರಿಯಸಖಿಯನ್ನು ಒಂದುವಾರ ಅತಿ ಜಾಗರೂಕತೆಯಿಂದ ಕಾಪಾಡಿದಳು.

ಒಂದುದಿನ ಆಕೆ ಸ್ನಾನಗೃಹಕ್ಕೆ ಹೋಗಿದ್ದ ಸಮಯದಲ್ಲಿ ಅಲಿನೂರ್ ಜನಾನಾ ಪ್ರವೇಶಿಸಿ ಪ್ರಿಯಸಖಿಯನ್ನು ನೋಡಿಬಿಟ್ಟನು. ಪರಸ್ಪರ ನೋಡಿದಕೂಡಲೇ ಅವರಲ್ಲಿ ಅನುರಾಗ ಉದಯಿಸಿತು. ಅವನು ಆಕೆಯನ್ನು ಪುಸಲಾಯಿಸಿ ಯಾರಿಗೂ ತಿಳಿಯದಂತೆ ಆಕೆಯೊಂದಿಗೆ ನಗರವನ್ನು ಬಿಟ್ಟು, ಒಬ್ಬ ಖಾಜಿಯ ಸಹಾಯದಿಂದ ಅವಳನ್ನು ಮದುವೆಯಾದನು. ಅಲ್‌ಫದಲ್ ತನ್ನ ಮಗನ ವರ್ತನೆಗಾಗಿ ತುಂಬಾ ಚಿಂತಿಸಿದನು. "ನಾನು ಸುಲ್ತಾನನ ಬಳಿ ಗೌರವಮರ್ಯಾದೆಗಳನ್ನು ಸಂಪಾದಿಸಿದ್ದೆ. ಆತನಿಗೆ ಈ ವಿಷಯ ತಿಳಿದರೆ ನನ್ನ ಮರ್ಯಾದೆ ಹೋಗುತ್ತದೆ. ನಾಲ್ಕು ಜನರ ಮುಂದೆ ತಲೆ ಎತ್ತಿಕೊಂಡು ಹೇಗೆ ತಿರುಗಾಡಲಿ?" ಎಂದು ವ್ಯಸನದಿಂದ ಹೆಂಡತಿಯೊಂದಿಗೆ ಹೇಳಿದನು.

"ಈ ವಿಷಯ ಸುಲ್ತಾನರವರಿಗೆ ಏಕೆ ಹೋಗಬೇಕು? ನಿಮ್ಮ ಮಗನಿಗೆ ನೀವೊಬ್ಬ ಗುಲಾಮಳನ್ನು ಕೊಂಡು ಕೊಟ್ಟರೆ ತಪ್ಪೇನು? ಸುಲ್ತಾನರಿಗೆ ಮತ್ತೊಬ್ಬಳನ್ನು ಕೊಂಡು ಕೊಡಿ. ಲೋಕದಲ್ಲಿ ಇವಳಿಗಿಂತಲೂ ಸುಂದರಿಯರು ಇರಲಾರರೇನು?" ಎಂದಳು ಅಲ್. ಗತ್ಯಂತರವಿಲ್ಲದೆ ಫದಲ್ ತನ್ನ ಮಗನು



ಮಾಡಿದ ತಪ್ಪನ್ನು ಕ್ಷಮಿಸಲು ನಿರ್ಧರಿಸಿದನು. ಈ ವಿಷಯವನ್ನು ತಾಯಿಯಿಂದ ರಹಸ್ಯವಾಗಿ ತಿಳಿದುಕೊಂಡು ಅಲಿನೂರ್ ಪ್ರಿಯಸಖಿಯೊಂದಿಗೆ ಮನೆಗೆ ಹಿಂತಿರುಗಿದನು.

ತನ್ನ ಮಗ ಮತ್ತು ಪ್ರಿಯಸಖಿ ತುಂಬಾ ಅನ್ಯೋನ್ಯವಾಗಿರುವುದನ್ನು ಕಂಡು ಫದಲ್ ಮನಸ್ಸು ತುಸ ನೆಮ್ಮದಿಯಾಯಿತು. 'ಅಲ್ಲಾ ಮಹಿಮೆ' ಎಂದುಕೊಂಡ ಫದಲ್.

ವಜೀರಸಾವೀ ಬಹಳ ಕುಟಿಲ. ಈ ರಹಸ್ಯವನ್ನು ಅರಿತು ಅವನೆಲ್ಲಿ ತನ್ನಮೇಲೆ ಸುಲ್ತಾನರಲ್ಲಿ ಚಾಡಿ ಹೇಳುವನೋ ಎಂದು ಫದಲ್ ಹೆದರಿದ್ದನು. ಸಾವೀಗೆ ಸ್ವಲ್ಪಮಟ್ಟಿಗೆ ಈ ಸಂಗತಿ ತಿಳಿದಿತ್ತು. ಆದರೆ ಸುಲ್ತಾನರು ಆ ವೇಳೆಗೆ ಗುಲಾಮಳ ವಿಷಯವನ್ನು ಮರೆತು ಬಿಟ್ಟಿದ್ದರು. ಆ ಕಾರಣ ಅವನಿಗೆ ಹಿರಿಯ ವಜೀರನಮೇಲೆ ದೂರುಹೇಳಲು ಧೈರ್ಯ ಸಾಲದಾಯಿತು.

ಕೊಂಚಕಾಲದಲ್ಲಿ ಹಿರಿಯವಜೀರ್ ಅಲ್ ಫದಲ್ ಹಾಸಿಗೆ ಹಿಡಿದ. ಆತನು ತನ್ನ ಅವಸಾನಕಾಲ ಸಮೀಪಿಸಿತೆಂದು ಗ್ರಹಿಸಿ, ಮಗನನ್ನು ಕರೆದು ಬುದ್ಧಿವಾದಹೇಳಿ ಕಣ್ಣುಮುಚ್ಚಿಕೊಂಡನು. ಆತನ ಮರಣಕ್ಕಾಗಿ ಬಸ್ರಾ ನಗರವೆಲ್ಲಾ ದುಃಖಿಸಿತು.

ತಂದೆ ತೀರಿಕೊಂಡನಂತರ ಅಲಿನೂರ್ ದುಃಖಸಾಗರದಲ್ಲಿ ಮುಳುಗಿದನು. ಅವನು ಮನೆಯಿಂದ ಹೊರಗೆ ಬರಲೇ ಇಲ್ಲ. ಕೊನೆಗೆ ನಗರದ ಗಣ್ಯವ್ಯಕ್ತಿಗಳು ಅವನನ್ನು ಮೂದಲಿಸಿ "ಹೀಗೆ ಚಿಂತಿಸುತ್ತಾ ಕುಳಿತರೆ






ಹೇಗೆ. ನಿಮ್ಮ ತಂದೆ ನಿನ್ನರೂಪದಲ್ಲಿ ಜೀವಿಸಿದ್ದಾನೆ" ಎಂದು ಸಮಾಧಾನ ಹೇಳಿದರು. ಆಲಿನೂರ್ ಅಂದಿನಿಂದ ಪ್ರತಿನಿತ್ಯ ತನ್ನ ಮಿತ್ರರನ್ನೆಲ್ಲಾ ಆಹ್ವಾನಿಸಿ ಸಂತೋಷಕೂಟಗಳನ್ನು ಏರ್ಪಡಿಸುತ್ತಿದ್ದನು. ಬಸ್ರಾನಗರದ ಗಣ್ಯವರ್ತಕರ ಮಕ್ಕಳೆಲ್ಲಾ ಅವನ ಮಿತ್ರರಾದರು. ಆಲಿನೂರನಸುತ್ತ ಓಡಾಡುತ್ತಾ ಅವನಿಗೆ ವಿನೋದವನ್ನುಂಟುಮಾಡುತ್ತಾ ಅವನ ಖರ್ಚಿನಿಂದ ತಾವು ಸಮಸ್ತ ಸೌಖ್ಯಗಳನ್ನು ಅನುಭವಿಸುತ್ತಿದ್ದರು.

ಆಲಿನೂರ್ ಅಮಾಯಕ. ಸ್ನೇಹಿತರು ಏನು ಕೇಳಿದರೂ ಕೊಟ್ಟುಬಿಡುತ್ತಿದ್ದನು. "ನೂರ್, ನಿಮ್ಮ ತೋಟ ತುಂಬಾ ರಮ್ಯವಾಗಿದೆ. ಅಂತಹ ತೋಟವನ್ನು ನಾನೆಂದೂ ನೋಡಿರಲಿಲ್ಲ" ಎಂದು ಯಾರಾದರೂ ಹೇಳಿದರೆ ಕೂಡಲೇ ಅದು ನಿನ್ನದು, ತೆಗೆದುಕೊ" ಎಂದು ಹೇಳಿಬಿಡುವನು.

ಹಣ ನೀರಿನಂತೆ ಖರ್ಚಾಗುತ್ತಿತ್ತು. ಮನೆ ತೋಟಗಳನ್ನು ವಿಚಕ್ಷಣೆಯಿಲ್ಲದೆ ತನ್ನ ಗೆಳೆಯರಿಗೆ ಕೊಟ್ಟುಬಿಟ್ಟು ಕೆಲವುದಿನಗಳಲ್ಲೇ ಆಲಿನೂರ್ ದಿವಾಳಿಯಾದನು.

"ಹಿಂದುಮುಂದು ನೋಡದೆ ಹಣವನ್ನೇಕೆ ಪೋಲುಮಾಡುವಿರಿ. ಇವರೆಲ್ಲಾ ನಿಜವಾಗಿ ಮಿತ್ರರೆಂದು ಭಾವಿಸುವಿರಾ?" ಎಂದು ಪ್ರಿಯಸಖಿ ಎಷ್ಟೋಬಾರಿ ಎಚ್ಚರಿಸಿದ್ದಳು. ಆದರೆ ಆಕೆಯ ಮಾತಿಗೆ ಆಲಿ ಕಿವಿಗೊಡಲಿಲ್ಲ. ಸೊತ್ತೆಲ್ಲಾ ಸಂಪೂರ್ಣವಾಗಿ ಕರಗಿಹೋಗುವತನಕ ಆಲಿನೂರ್ ಪ್ರಿಯಸಖಿಯನ್ನುಕುರಿತಾದರೂ ಯೋಚಿಸಲಿಲ್ಲ.

ಕಡೆಗೆ ಅವನ ಸ್ನೇಹಿತರು ಮಾಯವಾದರು. "ನಿಮ್ಮಬಳಿ ಹಣವಿರುವತನಕ ನೊಣಗಳು ಮುತ್ತುವಂತೆ ಮುತ್ತಿದರು. ಈಗ ಒಬ್ಬ ಸ್ನೇಹಿತನಾದರೂ ಮುಖ ತೋರಿಸುತ್ತಿಲ್ಲ" ಎಂದಳು ಪ್ರಿಯಸಖಿ ನಿಷ್ಠೂರವಾಗಿ.

"ನನ್ನ ಸ್ನೇಹಿತರ ವಿಚಾರವಾಗಿ ನೀನು ತಪ್ಪು ಅಭಿಪ್ರಾಯ ಹೊಂದಿರುವೆ. ನಾನು ನಿರ್ಗತಿಕನಾದರೂ ನನಗೆ ತಮ್ಮ ಬೆಂಬಲ ಕೊಟ್ಟು ಸಹಾಯಮಾಡಬಲ್ಲ ಸಮರ್ಥರವರು. ಪಾಪ, ಯಾವುದೋ ಕೆಲಸಬೊಗಸೆಗಳಲ್ಲಿ ನಿರತರಾಗಿರಬೇಕು. ನನಗೆ ಅಗತ್ಯವಾದುದರಿಂದ ನಾನೇ ಅವರಬಳಿಗೆ ಹೋಗುತ್ತೇನೆ.

ಅವರು ನನ್ನನ್ನು ಹೇಗೆ ಆದರಿಸುವರೋ ನೀನೇ ನೋಡುವಿಯಂತೆ" ಎಂದು ಹೇಳಿ ಆಲಿನೂರ್ ತನ್ನ ಸ್ನೇಹಿತನೊಬ್ಬನ ಮನೆಗೆ ಹೋಗಿ, ನೌಕರನೊಂದಿಗೆ ತಾನು ಬಂದಿರುವುದಾಗಿ ಹೇಳಿ ಕಳುಹಿಸಿದನು.

ಆ ಸ್ನೇಹಿತನಿಗೆ ಆಲಿನೂರನನ್ನು ನೋಡಲಿಷ್ಟವಿರಲಿಲ್ಲ; ನೌಕರನಮೂಲಕ ತಾನು ಮನೆಯಲ್ಲಿಲ್ಲವೆಂದು ಹೇಳಿ ಕಳುಹಿಸಿದನು.

"ಕಳ್ಳಕೊರಮ. ತಲೆಮರೆಸಿಕೊಂಡ. ಉಳಿದವರು ಇಷ್ಟು ನೀಚರಿರಲಾರರು" ಎಂದುಕೊಂಡ ಆಲಿನೂರ್.

ಆದರೆ ಒಬ್ಬರೂ ಆತನಿಗೆ ಸಹಾಯ ಮಾಡಲು ಮುಂದೆ ಬರಲಿಲ್ಲ. ಪೆಚ್ಚುಮುಖ ಹಾಕಿಕೊಂಡು ಆಲಿನೂರ್ ಮನೆಗೆ ಹಿಂತಿರುಗಿದ. ನಡೆದ ವಿಷಯವನ್ನು ಕೇಳಿ ಪ್ರಿಯಸಖಿ "ನಾನು ಹೇಳಿರಲಿಲ್ಲವೇ?" ಎಂದಳು.

ತರುವಾಯ ಅವರು ತಮ್ಮ ಮನೆಯಲ್ಲಿದ್ದ ಸಾಮುಗ್ರಿಗಳನ್ನು ಕ್ರಮೇಣ ಮಾರಿ ಆ ಹಣದಿಂದ ಜೀವನ ಸಾಗಿಸುತ್ತಿದ್ದರು. ಆ ಹಣ ಮುಗಿದನಂತರ ಆಲಿನೂರ್ ಚಿಂತಾಮಗ್ನನಾದನು. ಬದುಕುವದಾರಿ ಕಾಣಿಸಲಿಲ್ಲ.

ಪ್ರಿಯಸಖಿ ಕಣ್ಣೀರುಮಿಡಿಯುತ್ತಾ ಅವನೊಂದಿಗೆ "ಸಮಸ್ತವೂ ಹೋಯಿತೆಂದು ಚಿಂತಿಸಬೇಡಿ ನಿಮಗೆ ನಾನಿಲ್ಲವೇ? ಒಂದಾನೊಂದು ಕಾಲದಲ್ಲಿ ನನ್ನನ್ನು ಬೀದಿಯಲ್ಲಿ ನಿಮ್ಮ ತಂದೆಯವರು ಹತ್ತುಸಾವಿರ ದೀನಾರಗಳಿಗೆ ಕೊಂಡುಕೊಂಡರು. ಕಂಡವರು



ಯಾರು, ನನಗೆ ಇಂದು ಇನ್ನೂ ಹೆಚ್ಚು ಬೆಲೆ ಬರಬಹುದು. ನನ್ನನ್ನು ಬಜಾರಿನಲ್ಲಿ ವಿಕ್ರಯಿಸಿ ಹಣವನ್ನು ಪಡೆಯಿರಿ" ಎಂದಳು.

"ಪ್ರಿಯಸಖಿ, ನಿನ್ನನ್ನು ಮಾರುವುದೆಂತು? ನೀನಿಲ್ಲದೆ ನಾನೊಂದು ಗಳಿಗೆಯೂ ಜೀವಿಸಲಾರೆ" ಎಂದ ಆಲಿನೂರ್.

"ನಿಮ್ಮನ್ನು ತೊರೆದು ಮತ್ತೊಬ್ಬ ಯಜಮಾನನ ಬಳಿಗೆ ಹೋಗುವುದು ನನಗಾದರೂ ಇಷ್ಟವೆಂದು ಭಾವಿಸಿದಿರಾ? ಆದರೆ ಪರಿಸ್ಥಿತಿ ಬಲವತ್ತರವಾದುದು. ಅದು ನಮ್ಮಿಂದ ಯಾವ ಕೆಲಸವನ್ನಾದರೂ ಮಾಡಿಸಬಲ್ಲದು. ನೀವು ಈಗಿನ ಪರಿಸ್ಥಿತಿಯಿಂದ ಹೊರಬೀಳಬೇಕಾದರೆ ಉಳಿದಿರುವ ಮಾರ್ಗ ಇದೊಂದೇ" ಎಂದಳು ಪ್ರಿಯಸಖಿ.

ಆಕೆ ಬಹಳ ಒತ್ತಾಯಪೂರ್ವಕವಾಗಿ ಹೇಳಿದನಂತರ ಅವನು ಕಲ್ಲುಮನಸ್ಸು ಮಾಡಿಕೊಂಡು ಪೇಟೆಗೆ ಹೋಗಿ ಗುಲಾಮರನ್ನು ಹರಾಜುಹಾಕುವ ಪ್ರವೀಣನೊಬ್ಬನನ್ನು ಕಂಡು ತನ್ನ ವಿಷಯವನ್ನು ತಿಳಿಸಿದ.

"ಸ್ವಾಮಿ, ನಾನು ತಮ್ಮ ಸೇವಕ. ನಿಮಗೆ ನನ್ನಿಂದ ಸಾಧ್ಯವಾದ ಸಹಾಯ ನೀಡುವೆನು," ಎಂದ ಲೀಲಾವುಗಾರ.

ಆಲಿನೂರ್ ಅವನಿಗೆ ಪ್ರಿಯಸಖಿಯನ್ನು ತೋರಿಸಿದಕೂಡಲೇ ಅವನು ಆಕೆಯನ್ನು ಗುರ್ತಿಸಿ "ಅಲ್ಲಾಸಾಕ್ಷಿಯಾಗಿ ನಾನೀಕೆಯನ್ನು ಹಿಂದೊಮ್ಮೆ ಯಾರಿಗೋ ಮಾರಿದ್ದೆ" ಎಂದನು. ಆಕೆಗೆ ಸಾಧ್ಯವಾದಷ್ಟು ಹೆಚ್ಚು ಬೆಲೆಬರುವಂತೆ ಪ್ರಯತ್ನಿಸುವುದಾಗಿ ಆಲಿನೂರ್‌ಗೆ ಮಾತುಕೊಟ್ಟು ಅವನು ನಾಲ್ಕಾರು ಜನ ಗಿರಾಕಿಗಳನ್ನು ಸಂಗಡ ಕರೆದುಕೊಂಡು ಬಂದನು. ಕೊಂಚಹೊತ್ತಿಗೆಲ್ಲಾ ಅಲ್ಲೊಂದು ಗುಂಪು ಸೇರಿತು. ಪ್ರಿಯಸಖಿಯನ್ನು ವೇದಿಕೆಯಮೇಲೆ ನಿಲ್ಲಿಸಿ "ಧನಿಕರೇ, ವರ್ತಕಶ್ರೇಷ್ಠರೇ, ಈ ಅಪೂರ್ವಸುಂದರಿಗೆ ಎಷ್ಟು ಬೆಲೆಕೊಡುವಿರಿ?" ಎಂದ ಲೀಲಾವುಗಾರ. ಯಾರೊ ನಾಲ್ಕು ಸಾವಿರ ದೀನಾರಗಳೆಂದರು. ಮತ್ತೊಬ್ಬ ಐನೂರು ಹೆಚ್ಚಿಸಿದ.

ಆದೇವೇಳೆಗೆ ಕುದುರೆಯಮೇಲೇರಿ ಅತ್ತ ಹೋಗುತ್ತಿದ್ದ ಸಾವೀ ತಟಕ್ಕನೆ ನಿಂತನು. ಕೊಂಚ ಮರೆಯಲ್ಲಿದ್ದ ಆಲಿನೂರನನ್ನು ಕಂಡು "ಈ ದೌರ್ಭಾಗ್ಯನು ಬೇರೇನೂ ಮಾರಲು ಇಲ್ಲದೆ ತನ್ನ ಗುಲಾಮಳನ್ನು ಮಾರಿಕೊಳ್ಳು



ತ್ತಿರುವಂತಿದೆ" ಎಂದುಕೊಂಡ ವಜೀರ. ತರುವಾಯ ಪ್ರಿಯಸಖಿಯಕಡೆ ನೋಡಿ ಆಲಿ ನೂರ್ ವಿವಾಹವಾದ ಗುಲಾಮಳು ಅವಳೇ ಎಂದು ಗ್ರಹಿಸಿದನು. ಪ್ರಿಯಸಖಿಯನ್ನು ನೋಡದಿದ್ದರೂ ಅವಳ ಶೀಲವನ್ನು ಪ್ರತಿಯೊಬ್ಬರೂ ಹೊಗಳುತ್ತಿದ್ದುದನ್ನು ಸಾವೀ ಕೇಳಿದ್ದನು. ಇಂತಹ ಸುಂದರಿ ಚೌಕದಲ್ಲಿ ಮಾರಲ್ಪಡುತ್ತಿರುವಳೆಂಬ ಅಂಶ ಅವನ ಆಶೆಯನ್ನು ಕೆರಳಿಸಿತು.

ಕೂಡಲೇ ವಜೀರ್ ಸಾವೀ ಲೀಲಾವುಗಾರನಹತ್ತಿರ ಬಂದು "ಏಯ್, ಆ ಗುಲಾಮಳನ್ನು ನಾನು ಕೊಂಡುಕೊಳ್ಳುತ್ತೇನೆ. ಹರಾಜಿನಕಡೇ ಬೆಲೆಗೆ ನನಗೇ ಕೊಟ್ಟುಬಿಡು" ಎಂದ.

ಹರಾಜು ಹಾಕುತ್ತಿದ್ದಾತನ ಬಾಯಿ ಕಟ್ಟಿತು. ಸಾವೀ ಮಹಾಮಂತ್ರಿ. ಅವನಿಗೆದುರಾಗಿ ನಿಂತು ಬೆಲೆ ಏರಿಸುವ ಸಾಹಸ ಯಾರೂ ಮಾಡಲಾರರು. ಆದುದರಿಂದ ಲೀಲಾವುಗಾರನು ವಜೀರನೊಂದಿಗೆ "ಚಿತ್ತ, ಮಹಾಸ್ವಾಮಿ. ತಮ್ಮ ಖರೀದಿಯನ್ನು ಈಗಲೇ ಖಾಯಂಮಾಡುತ್ತೇನೆ" ಎಂದು ಹೇಳಿ, ಅವನು ಆಲಿನೂರನನ್ನು ಸಮೀಪಿಸಿ ರಹಸ್ಯವಾಗಿ "ಸ್ವಾಮಿ, ಇಂದು ನಿಮ್ಮ ಅದೃಷ್ಟ ನೆಟ್ಟಗಿಲ್ಲ. ಈ ದುರುಳ ಬೆಲೆ ಏರಲು ಅವಕಾಶಕೊಡುವುದಿಲ್ಲ. ಕೊಡುತ್ತೇನೆಂದು ಒಪ್ಪಿದರೂ ನಾಲ್ಕು ಸಾವಿರದೈನೂರು ದೀನಾರಗಳನ್ನೂ ಕೊಡುವುದಿಲ್ಲ. ಸುಮ್ಮನೆ ಸತಾಯಿಸುತ್ತಾನೆ"



ಎಂದು ಹೇಳಿದನು. ಇದನ್ನು ಕೇಳಿ ಆಲಿನೂರ್ ಕೋಪದಿಂದ ಕಿಡಿಕಿಡಿ ಯಾದನು. "ಯಾವುದಾದರೊಂದು ಉಪಾಯ ಹೇಳು" ಎಂದು ಹರಾಜು ಹಾಕುವವನನ್ನು ಕೇಳಿದ.

"ಒಂದೇ ಒಂದು ಉಪಾಯವಿದೆ. ನಿಮ್ಮ ಗುಲಾಮಳನ್ನು ಶಿಕ್ಷಿಸುವ ಸಲುವಾಗಿ ಪೇಟೆಯಲ್ಲಿ ನಿಲ್ಲಿಸಿ ಹುಸಿ ಹರಾಜು ಮಾಡಿಸಿದಂತೆ ನಟಿಸಿ. ಆಕೆಯನ್ನು ಮಾರುವ ಉದ್ದೇಶವಿಲ್ಲವೆಂದು ವಜೀರನಿಗೆ ಹೇಳಿ ನಿಮ್ಮ ಗುಲಾಮಳನ್ನು ಕರೆದುಕೊಂಡು ಹೋಗಿಬಿಡಿ" ಎಂದು ಸಲಹೆ ಕೊಟ್ಟು, ಹರಾಜು ಹಾಕುವವನು ಪ್ರಿಯಸಖಿಯನ್ನು ಕರೆದುಕೊಂಡು ಹೋಗಿ ವಜೀರನಿಗೆ ಒಪ್ಪಿಸಿದನು. ತರುವಾಯ ಅವನು ವಜೀರನೊಂದಿಗೆ "ಅಯ್ಯಾ, ಈ

ಗುಲಾಮುಳ ಯಜಮಾನ ಬರುತ್ತಿದ್ದಾನೆ. ಆತ ನೊಂದಿಗೆ ಉಳಿದ ವಿಷಯುಗಳನ್ನು ಇತ್ಯರ್ಥ ಮಾಡಿಕೊಳ್ಳಿ" ಎಂದನು.

ಅಷ್ಟರಲ್ಲಿ ಅಲ್ಲಿಗೆ ಆಲಿನೂರ್ ಬಂದು ಪ್ರಿಯಸಖಿಯ ಕಪಾಲಕ್ಕೆ ಒಂದು ಏಟು ಕೊಟ್ಟು "ಗುಲಾಮುಳೀ, ಈಗಲಾದರೂ ಬುದ್ಧಿ ಬಂತೇ? ನಡಿ ಮನೆಗೆ. ಮತ್ತೊಮ್ಮೆ ಹೀಗೆ ಮಾಡಿದರೆ ನಿನ್ನನ್ನು ನಿಜವಾಗಿಯೂ ಮಾರಿ ಬಿಡುತ್ತೇನೆ" ಎಂದು ಗದರಿದ.

ವಜೀರನು ವಿಸ್ಮಿತನಾಗಿ "ಏನಿದು? ನಾನು ಇವಳನ್ನು ಬೆಲೆಗೆ ಕೊಂಡುಕೊಂಡೆ. ಇವಳು ನನ್ನವಳು" ಎಂದ.

"ನಾನು ಮಾರಾಟಮಾಡುವ ಮೊದಲೇ ನೀನು ಕೊಂಡುಕೊಳ್ಳುವುದೆಲ್ಲಿಂದ ಬಂತು? ನಡಿನಡಿ" ಎಂದ ಆಲಿನೂರ್.

"ಮಹಾಜನರೇ, ನೀವೇ ನ್ಯಾಯ ಹೇಳಿ. ಈ ಗುಲಾಮುಳು ನನ್ನ ಪಾಲಿನವಳಲ್ಲವೇ?" ಎಂದು ಹೇಳುತ್ತಾ ವಜೀರನು ಮುಂದೆ ಸಾಗಿ ಪ್ರಿಯಸಖಿಯ ಕೈ ಹಿಡಿದುಕೊಂಡನು. ಅಲ್ಲಿ ನೆರದಿದ್ದವರೆಲ್ಲ ತನ್ನ ಪದವಿಗೆ ಹೆದರಿ ತನ್ನ ಮಾತಿಗೆ ಬೆಂಬಲಕೊಡುವರೆಂದು ವಜೀರ್ ಸಾವೀ ಭಾವಿಸಿದ್ದ. ಆದರೆ ಜನರಿಗೆ ಆಲಿ ನೂರನಮೇಲೆ ಆದರಾಭಿಮಾನ ಹೆಚ್ಚಾಗಿತ್ತು. ಯಾರೂ ವಜೀರನಪರ ವಾದಿಸಲಿಲ್ಲ. ಆಲಿ ನೂರ್ ವಜೀರನ ಹೊಟ್ಟೆಯನ್ನು ತಿವಿಯುತ್ತಾ ಬೈದುದೂಡಿ ಪ್ರಿಯಸಖಿಯೊಂದಿಗೆ ಮನೆ ಸೇರಿಕೊಂಡನು.

ವಜೀರನ ಸಂಗಡ ಬಂದಿದ್ದ ಭಟರು ಆಲಿ ನೂರನನ್ನು ಅಟ್ಟಿಸಿಕೊಂಡು ಹೋಗಲು ಯತ್ನಿಸಿದರು. ಆದರೆ ಅಲ್ಲಿ ನೆರೆದಿದ್ದ ಜನರು ಅವರ ಪ್ರಯತ್ನವನ್ನು ನಿವಾರಿಸಿ ಭಂಗ ಗೊಳಿಸಿದರು.

ಮೂಗಿನಿಂದ ರಕ್ತಕಾರುತ್ತಾ ಕೆಳಗೆಬಿದ್ದಿದ್ದ ಸಾವೀ ಎದ್ದುನಿಂತು ತನಗಾದ ಅತ್ಯಾಚಾರ ವನ್ನು ಕುರಿತು ಸುಲ್ತಾನರಿಗೆ ಹೇಳಲು ಹೊರಟನು. ಹಿಂದಿನಿಂದ ಅವನನ್ನು ನೋಡಿ ಜನ ಗಹಗಹಿಸಿ ನಕ್ಕರು. ಈ ದುರುಳನಿಗೆ ತಕ್ಕ ಶಿಕ್ಷೆಕೊಟ್ಟ ಆಲಿನೂರನಮೇಲೆ ಅವ ರಿಗೆ ಗೌರವ ಹೆಚ್ಚಾಯಿತು.

[ಇನ್ನೂ ಇದೆ]







# ಧೀರಾನಂದ

ಪೂರ್ವಕಾಲದಲ್ಲಿ ದಂಡಕಾರಣ್ಯದಲ್ಲಿ ಯೋಗಾನಂದನೆಂಬ ಸಿದ್ಧಪುರುಷನು ಗೋದಾವರಿ ತೀರದಲ್ಲಿ ಆಶ್ರಮವೇರ್ಪಡಿಸಿ ಕೊಂಡಿದ್ದನು. ಯೋಗವಿದ್ಯೆಯಲ್ಲಿ ಆತನಬಳಿ ಶಿಕ್ಷಣಹೊಂದಲು ಎಲ್ಲ ಮತದವರೂ ಬರುತ್ತಿದ್ದರು. ಬಂದು ಆತನಿಗೆ ಶುಶ್ರೂಷೆಮಾಡುತ್ತಿದ್ದರು. ಒಂದು ವರ್ಷಕಾಲ ಅವರನ್ನು ಕಡುತರವಾದ ಪರೀಕ್ಷೆಗೊಳಗುಮಾಡಿ, ಅವರು ತನ್ನಿಂದ ವಿದ್ಯೆಯನ್ನು ಕಲಿಯಲು ಅರ್ಹರೆಂದು ತೋರಿದರೆಮಾತ್ರ ಅವರಿಗೆ ಶಿಷ್ಯತ್ವವನ್ನು ಕೊಡುತ್ತಿದ್ದನು. ಇಲ್ಲದಪಕ್ಷಕ್ಕೆ ಯಾವದಾಕ್ಷಿಣ್ಯವೂ ಇಲ್ಲದೆ ಅವರನ್ನು ಮನೆಗೆ ಕಳುಹಿಸಿಬಿಡುತ್ತಿದ್ದನು.

ಯೋಗಾನಂದನು ಆಗಾಗ ತನ್ನ ಆಶ್ರಮವನ್ನು ಬಿಟ್ಟು ಶಿಷ್ಯರೊಂದಿಗೆ ಅರಣ್ಯಮಾರ್ಗದಲ್ಲಿ ಇತರ ಪ್ರಾಂತಗಳಿಗೆ ಹೋಗುತ್ತಿದ್ದನು. ಆತನ ಶಿಷ್ಯರು ಅಲ್ಲಿ ಹೊಸಹೊಸ ವಿಷಯಗಳನ್ನು ತಿಳಿದುಕೊಳ್ಳುತ್ತಿದ್ದರು. ಅನೇಕ ಸ್ಥಳ, ದೇವತೆಗಳ, ಪುರಾಣಗಳ ಪರಿಚಯಮಾಡಿಕೊಳ್ಳುತ್ತಿದ್ದರು. ಅನೇಕವಿಧವಾದ ಬ್ರಹ್ಮರಾಕ್ಷಸರನ್ನು ವಶಪಡಿಸಿಕೊಳ್ಳುವುದನ್ನು ಕಲಿಯುತ್ತಿದ್ದರು.

ಒಮ್ಮೆ ಯೋಗಾನಂದನಬಳಿ ಶಿಷ್ಯತ್ವ ಪಡೆಯಲು ಧೀರಸಿಂಹನೆಂಬ ಕ್ಷತ್ರಿಯ ಕುಮಾರನು ಬಂದನು. ಚಿಕ್ಕವನೇ ಆದರೂ ಅನೇಕ ಯುದ್ಧಗಳಲ್ಲಿ ಕಾದಾಡಿ ವಿಜಯಗಳಿಸಿದ್ದನು. ಅವನಿಗೆ ಭಯವೆಂದರೇನೆಂಬುದು ತಿಳಿಯದು. ಎಲ್ಲರಂತೆ ಅವನೂ ಒಂದು ವರ್ಷದ ಪರೀಕ್ಷಾಕಾಲದಲ್ಲಿದ್ದನು. ಇನ್ನೇನು ಕೆಲವಾರು ದಿನಗಳಲ್ಲಿ ಅವಧಿ ಮುಗಿಯುವುದರಲ್ಲಿತ್ತು.

ಆ ಸಮಯದಲ್ಲಿ ಯೋಗಾನಂದನು ತನ್ನ ಶಿಷ್ಯರೊಂದಿಗೆ ಹೊರಟು ಒಂದು ಸರೋವರವನ್ನು ತಲುಪಿದನು. ಸರೋವರದ ದಡದಲ್ಲಿ ಒಂದು ಪರ್ಣಶಾಲೆಯನ್ನು ನಿರ್ಮಿಸಿದರು. ಆ ಪರ್ಣಶಾಲೆಗೆ ಅನತಿದೂರದಲ್ಲಿ ಒಂದು ಆಲದವೃಕ್ಷವಿತ್ತು. ಅದು ಸುಮಾರು ಒಂದು ನೂರು ಎಕರೆ ವಿಸ್ತಾರವನ್ನು ಆಕ್ರಮಿಸಿತ್ತು. ಸರಸ್ಸಿನ ತೀರವನ್ನು ಸೇರಿದ ರಾತ್ರಿ

ಬಿ. ಬಾಬುರಾವ್



ಯೋಗಾನಂದನು ತನ್ನ ಶಿಷ್ಯರೊಂದಿಗೆ "ಈ ಆಲದಮರ ಬಹಳ ಪುರಾತನವಾದುದು. ತ್ರೇತಾಯುಗದ ಪಿಶಾಚಿಗಳೂ ಇದರಲ್ಲಿವೆ. ಅವುಗಳ ವಿಷಯವನ್ನು ನಿಮಗೆ ಸಾವಕಾಶ ವಾಗಿ ಹೇಳುತ್ತೇನೆ. ಈ ರಾತ್ರಿ ನೀವುಯಾರೂ ಆ ಮರದಬಳಿಗೆ ಹೋಗಬಾರದು. ಇದು ನನ್ನ ಕಟ್ಟಾಜ್ಞೆ" ಎಂದನು.

ಆ ರಾತ್ರಿ ಎಲ್ಲರೂ ಊಟಮುಗಿಸಿ ಮಲಗಿದರು. ಎಲ್ಲರೊಂದಿಗೆ ಧೀರಸಿಂಹನೂ ನಿದ್ದೆ ಹೋದನು. ಆದರೆ ಅರ್ಧರಾತ್ರಿ ವೇಳೆಯಲ್ಲಿ ಅವನಿಗೆ ವಿಚಾರವಾಯಿತು. ಎಷ್ಟು ಹೊರಳಾಡಿದರೂ ಮತ್ತೆ ನಿದ್ರೆ ಬರಲಿಲ್ಲ. ಅವನು ಪರ್ಣಶಾಲೆಯಿಂದ ಹೊರಗೆ ಬಂದನು. ಆಲದ ಮರ ಕಾಣಿಸಿತು. ಭಯವೆಂದರೇನೆಂಬುದನ್ನು ಅರಿಯದ ಧೀರಸಿಂಹನು ನೆಟ್ಟಗೆ ಮರದಕೆಳಕ್ಕೆ ಹೋಗಲು ನಿರ್ಧರಿಸಿದನು. ಮರುದಿನ ಗುರುಗಳು ಹೇಳಲಿದ್ದ ಮರವನ್ನು ಕುರಿತು ತಾನೇ ಸ್ವತಃ ಕೆಲವು ಅಂಶಗಳನ್ನು ತಿಳಿದುಕೊಳ್ಳುವ ಕುತೂಹಲವಾಯಿತು.

ಅವನು ಮರವನ್ನು ಸಮೀಪಿಸಿ ಅದರ ಕೆಳಗಡೆ ಬೀಳಲುಗಳ ನಡುವೆ ನಡೆದನು. ಅವನು ಕೊಂಚದೂರ ಹೋಗುವಷ್ಟರಲ್ಲಿ ಒಂದಾನೊಂದು ಬೀಳಲಿನಿಂದ ಶ್ವೇತಾಕಾರವೊಂದು ಕೆಳಗಿಳಿಯುತ್ತಿರುವುದು ಕಾಣಿಸಿತು. ಅದು ನೆಲದಮೇಲೆ ಕಾಲಿಟ್ಟ ಕೂಡಲೇ ಧೀರಸಿಂಹನು "ಯಾರು ನೀನು?" ಎಂದು ಪ್ರಶ್ನಿಸಿದನು.

"ನನ್ನಹೆಸರು ಅನುಕಂಪ. ಈ ಅರಣ್ಯದಲ್ಲಿ ರಾಮನಹೆಂಡತಿ ಸೀತೆ ಇರುವಳೆಂದು ರಾವಣನಿಗೆ ಹೇಳಿದವನು ನಾನು." ಎಂದಿತು ಆ ಬಿಳಿದಾದ ಆಕೃತಿ.

ಧೀರಸಿಂಹನು ಹೆದರಲಿಲ್ಲ. "ನೀನು ಇನ್ನೂ ಇಲ್ಲೇ ಇರುವೆಯಾ?" ಎಂದು ಅನುಕಂಪನನ್ನು ಪ್ರಶ್ನಿಸಿದನು.

"ಹೆಚ್ಚುಕಾಲ ನರಕದಲ್ಲಿರುತ್ತೇನೆ. ಅಲ್ಲಿ ನನಗೆ ಪ್ರವೇಶ ಸಿಕ್ಕದಿದ್ದರೆ ಈ ಮರವನ್ನು ಆಶ್ರಯಿಸುತ್ತೇನೆ" ಎನ್ನುತ್ತಾ ಅನುಕಂಪನು ಮೆಲ್ಲಮೆಲ್ಲನೆ ಹತ್ತಿರ ಸರಿಯುತ್ತಿದ್ದನು.

"ಓಹೋ, ನರಕದಲ್ಲಿ ನಿಮ್ಮವರೆಲ್ಲಾ ಹೇಗಿದ್ದಾರೆ" ಎಂದ ಧೀರಸಿಂಹ. ಅನುಕಂಪನು ತನ್ನನ್ನು ಸಮೀಪಿಸುತ್ತಿರುವುದನ್ನು

ಅವನು ಗಮನಿಸುತ್ತಲೇ ಇದ್ದನು. "ಹೇಗಿರುವರೆಂದು ಹೇಳಲಿ. ನರಕಜ್ವಾಲೆಯಲ್ಲಿ ಬೆಂದು ನಾನಾ ಅವಸ್ಥೆಗೀಡಾಗಿರುವರು" ಅನುಕಂಪದಿಂದ ನುಡಿದ ಅನುಕಂಪ.

"ಅವರಲ್ಲಿ ನರಕಬಾಧೆಯನ್ನು ಸಹನೆಯಿಂದ ತಾಳಿಕೊಂಡಿರುವವರು ಯಾರು?" ಧೀರಸಿಂಹನು ಕೇಳಿದ.

"ರಾವಣನು ಎಲ್ಲರಿಗಿಂತಲೂ ಹೆಚ್ಚು ಸಹನೆ ತೋರಿಸುತ್ತಿದ್ದಾನೆ" ಎಂದು ಉತ್ತರಿಸಿದ ಅನುಕಂಪ.

"ರಾವಣನಿಗೆ ಯಾವ ಶಿಕ್ಷೆ ವಿಧಿಸಲಾಗಿದೆ?" ಧೀರಸಿಂಹನ ಪ್ರಶ್ನೆ.

"ಎಣ್ಣೆಕೊಪ್ಪರಿಗೆಗಳನ್ನು ಆತನು ಯಾವಾಗಲೂ ಕಾಯಿಸಬೇಕು."

"ಅದೇನಂತಹ ಕಷ್ಟಕರವಾದ ಕೆಲಸವಲ್ಲ"

"ಎಣ್ಣೆಕಡಾಯಿಯ ಕೆಳಗೆ ಸುಡುತ್ತಿರುವುದು ರಾವಣನೇ"

"ಹಾಗೆ ಹೇಳು. ಅದು ನಿಜವಾಗಿ ಕ್ರೂರ ಶಿಕ್ಷೆ. ಆದರೆ ಈ ನರಕಯಾತನೆಯನ್ನು ತುಸವಾದರೂ ತಡೆಯಲಾರದೆ ಒದ್ದಾಡುತ್ತಿರುವವನು ಯಾರು?" ಧೀರಸಿಂಹನು ಕೇಳಿದನು. ಅನುಕಂಪನು ಮೆಲ್ಲಮೆಲ್ಲನೆ ತನ್ನನ್ನು ಸಮೀಪಿಸುತ್ತಿರುವುದನ್ನು ಗಮನಿಸುತ್ತಿದ್ದ ಧೀರಸಿಂಹ.

"ಕುಂಭಕರ್ಣನು ನರಕಯಾತನೆ ತಡೆಯಲಾರದೆ ಒದ್ದಾಡುತ್ತಿರುವನು. ಸದಾ ಅರಚುತ್ತಾ ಎಲ್ಲರೂ ನಿದ್ರೆಗೆಡುವಂತೆ ಮಾಡುತ್ತಿದ್ದಾನೆ" ಎಂದ ಅನುಕಂಪ.



"ಕುಂಭಕರ್ಣನಿಗೆ ವಿಧಿಸಿರುವ ಶಿಕ್ಷೆ ಯಾದರೂ ಏನು?"

"ಮೊಣಕಾಲಿನ ವರೆವಿಗೂ ಬೆಂಕಿ ಇಟ್ಟಿದ್ದಾರೆ."

"ಆ ಬಾಧೆಗೇ ಅಷ್ಟೊಂದು ಅರಚುತ್ತಿದ್ದಾನೆಯೇ?"

"ಬೆಂಕಿಯಲ್ಲಿ ಕುಂಭಕರ್ಣನು ತಲೆ ಕೆಳಗಾಗಿ ನೇತಾಡುತ್ತಿದ್ದಾನೆ.

"ಪಾಪ, ಕುಂಭಕರ್ಣನು ಬೊಬ್ಬಿಟ್ಟಾಗ ಆಗುವ ಶಬ್ದ ನನಗೆ ತೋರಿಸುವೆಯಾ?" ಎಂದ ಧೀರನಾದ ಧೀರಸಿಂಹ.

"ಓ, ಅದಕ್ಕೇನು. ಒಮ್ಮೆ ಕಿರಿಚುವೆನು ಕೇಳು" ಎಂದು ಅನುಕಂಪನು ಗೂಬೆಗಳೂ ಬೆದರುವಂತೆ ಭಯಂಕರವಾಗಿ ಕಿರಿಚಿದನು.

ಧೀರಸಿಂಹನು ಕಿವಿಗಳನ್ನು ಮುಚ್ಚಿಕೊಂಡ. "ಓಸ್, ಇಷ್ಟೇಯೇ! ಕುರಿ ಗಟ್ಟಿಯಾಗಿ ಕೂಗಿದಷ್ಟಾದರೂ ಶಬ್ದವಿಲ್ಲ. ಪಾಪ, ನಿನಗೆ ಕುಂಭಕರ್ಣನು ಅರಚುವಂತೆ ಅರಚಲು ಸಾಧ್ಯವಿಲ್ಲದಿರಬಹುದು" ಧೀರಸಿಂಹನ ಮಾತಿನಲ್ಲಿ ಮೂದಲಿಕೆಯಿತ್ತು.

"ಈಸಾರಿ ಕೇಳು" ಎಂದು ಅನುಕಂಪನು ಭೂಮಿ ನಡುಗುವಂತೆ ಮತ್ತೊಮ್ಮೆ ಬೊಬ್ಬಿಟ್ಟನು. ಧೀರಸಿಂಹನು ಕಿವಿಗಳನ್ನು ಗಟ್ಟಿಯಾಗಿ ಮುಚ್ಚಿಕೊಂಡರೂ ಅವನ ತಲೆ ತಿರುಗಿದಂತಾಯಿತು.

"ಓಹೋ, ಕುದುರೆ ಗಟ್ಟಿಯಾಗಿ ಕೆನೆದಷ್ಟು ಶಬ್ದವಾದರೂ ಆಗಲಿಲ್ಲ. ಕುಂಭಕರ್ಣನು ಇದಕ್ಕಿಂತಲೂ ಜೋರಾಗಿ ಕಿರಿಚಿಕೊಳ್ಳುತ್ತಿರಬೇಕು. ಅವನಂತೆ ಬೊಬ್ಬಿಡಲು ನಿನಗೆ ಎಂದಿಗೂ ಸಾಧ್ಯವಿಲ್ಲ" ಧೀರಸಿಂಹನ ಸ್ವರದಲ್ಲಿ ತಾತ್ಸಾರ ತುಂಬಿತ್ತು.

"ಹಾಗಾದರೆ ಈಸಲ ಕೇಳು" ಎಂದು ಅನುಕಂಪನು ದೀರ್ಘವಾಗಿ ಉಸಿರೆಳೆದುಕೊಂಡು ಕಿವಿ ಕಿವುಡಾಗುವಂತೆ ಬೊಬ್ಬಿಟ್ಟನು. ಧೀರಸಿಂಹನು ಕಿವಿಗಳನ್ನು ಗಟ್ಟಿಯಾಗಿ ಮುಚ್ಚಿಕೊಂಡರೂ ಪ್ರಯೋಜನವಾಗಲಿಲ್ಲ. ಅನುಕಂಪನ ಧ್ವನಿಗೆ ಸ್ಮೃತಿತಪ್ಪಿ ಬಿದ್ದುಬಿಟ್ಟನು.

ಆ ಸಮಯ ಸಾಧಿಸಿ ಅವನನ್ನು ನುಂಗಲು ಅನುಕಂಪನು ಒಂದು ಹೆಜ್ಜೆ ಮುಂದಕ್ಕಿಟ್ಟನು. ಆದರೆ ಅನುಕಂಪನ ಬೊಬ್ಬೆಯನ್ನು ಕೇಳಿ ಯೋಗಾನಂದನು ಎಚ್ಚರಹೊಂದಿ, ಆಶ್ರಮದಿಂದ ವೇಗವಾಗಿ ವೃಕ್ಷದಬಳಿಗೆ ಬಂದು, ತನ್ನ ಕಮಂಡಲದಲ್ಲಿದ್ದ ತಪೋಜಲವನ್ನು ಅನುಕಂಪನಮೇಲೆ ಚಿಮಿಕಿಸಿದನು. ಕೂಡಲೇ ಅನುಕಂಪನು ಭೂಮಿಗಿಳಿದು ಪಾತಾಳಕ್ಕೆ ಪರಾರಿಯಾದನು.

ತರುವಾಯ ಯೋಗಾನಂದನು ಧೀರಸಿಂಹನನ್ನು ಆಶ್ರಮಕ್ಕೆ ಕರೆದುಕೊಂಡು ಹೋಗಿ ಅವನಿಂದ ನಡೆದುದನ್ನೆಲ್ಲಾ ಅರಿತು "ವತ್ಸ, ನನ್ನ ಆಜ್ಞೆಯನ್ನು ಉಲ್ಲಂಘಿಸಿದರೂ ಸಹ ನಿನ್ನ ಧೈರ್ಯಕ್ಕೆ ಮೆಚ್ಚಿದೆ. ಇಂದಿನಿಂದ ನೀನು ಧೀರಾನಂದನೆಂಬ ಹೆಸರಿನಿಂದ ನನ್ನ ಶಿಷ್ಯನಾಗು" ಎಂದು ಅವನಿಗೆ ಯೋಗವಿದ್ಯೆಯನ್ನು ಉಪದೇಶಮಾಡಿದನು.






## 9

[ ಸೂರ್ಯಭಗವಾನನ ಪಶುಗಳನ್ನು ಕೊಂದುತಿಂದ ಪಾಪದ ಫಲವಾಗಿ ರೂಪಧರನ ಅನುಚರರೆಲ್ಲ ನೌಕೆಯೊಂದಿಗೆ ಸಮುದ್ರದಪಾಲಾದರು. ರೂಪಧರನು ಒಬ್ಬೊಂಟಿಗನಾಗಿ ಒಂದು ತೀರದಮೇಲೆ ಬಂದುಬಿದ್ದು, ಆ ದೇಶವನ್ನು ಆಳುವ ಮಹಾಮೇಧಿ ಮಹಾರಾಜನ ಕುವರಿಯಾದ ವಾರುಣಿಯ ಸಹಾಯದಿಂದ ಅರಮನೆ ಸೇರಿಕೊಂಡು ರಾಜನ ಆಶ್ರಯ ಪಡೆದನು. ಮಹಾಮೇಧಿ ರೂಪಧರನಿಗೆ ಸಕಲ ಸಹಾಯ ಮಾಡುವುದಾಗಿ ಮಾತುಕೊಟ್ಟನು. ಆ ರಾತ್ರಿ ರೂಪಧರನು ಸುಖವಾಗಿ ನಿದ್ರಿಸಿದನು. ]

**ಮೂ**ರನೇಯ ದಿನ ಬೆಳಗಾಯಿತು. ಮಹಾಮೇಧಿಯೊಂದಿಗೆ ರೂಪಧರನು ನಿದ್ರೆಯಿಂದ ಎಚ್ಚೆತ್ತನು. ಇಬ್ಬರೂ ಒಟ್ಟಿಗೆ ಸಭಾಭವನಕ್ಕೆ ಹೋದರು. ಸಭಾಭವನ ರೇವಿಗೆ ಸಮೀಪದಲ್ಲಿತ್ತು. ಅಲ್ಲಿ ನುಣುಪಾದ ಕಲ್ಲಿನಿಂದ ಮಾಡಿದ ಆಸನಗಳಿದ್ದುವು. ಮಹಾಮೇಧಿ ಒಂದು ಪೀಠದಲ್ಲಿ ಕುಳಿತು ರೂಪಧರನನ್ನು ತನ್ನ ಪಕ್ಕದಲ್ಲಿ ಕೂರಿಸಿಕೊಂಡನು. ಇಷ್ಟರಲ್ಲಿ ರಾಜಭಟನೊಬ್ಬನು ರೂಪಧರನ ಪ್ರಯಾಣಕ್ಕೆ ವ್ಯವಸ್ಥೆಮಾಡಲು ನಗರಕ್ಕೆ ಹೋದನು. ಅವನು ನಗರದ ಗಣ್ಯಮಹನೀಯರೆಲ್ಲರ ಮನೆಗಳಿಗೆ ಹೋಗಿ, ಯಾರೋ ಅಪೂರ್ವ ವ್ಯಕ್ತಿಯೊಬ್ಬನು ರಾಜನ ಅತಿಥಿಯಾಗಿ ಬಂದಿರುವನೆಂದು ತಿಳಿಸಿದನು.

ಹೊಸ ವ್ಯಕ್ತಿಯನ್ನು ಕಾಣುವ ಆತುರದಿಂದ ಅವರೆಲ್ಲ ರಾಜಭವನಕ್ಕೆ ಬಂದರು. ಬೇಗ ಸಭಾಭವನದಲ್ಲಿದ್ದ ಆಸನಗಳೆಲ್ಲಾ ತುಂಬಿಹೋದುವು. ಸಭೆಯಲ್ಲಿ ಸೇರಿದ್ದವರನ್ನು

ಒಂದು ಗ್ರೀಕ್ ಪುರಾಣಕಥೆಯ ಆಧಾರದಿಂದ






ಕುರಿತು ರಾಜನು ಹೀಗೆಂದನು: "ಮಹಾಜನರೇ, ನಮ್ಮ ಪಕ್ಕದಲ್ಲಿ ಕುಳಿತಿರುವ ವ್ಯಕ್ತಿ ನಮ್ಮ ಮನೆಗೆ ಅತಿಥಿಯಾಗಿ ಬಂದಿರುತ್ತಾನೆ. ಆತನು ಯಾರೋ ನಮಗೆ ತಿಳಿಯದು. ಕಡಲಪ್ರಯಾಣಮಾಡಿ ಬಂದಿರುವುದಾಗಿ ಹೇಳಿದ್ದಾನೆ. ಆತನು ಪೂರ್ವದಿಕ್ಕಿನಿಂದ ಬಂದನೋ, ಪಶ್ಚಿಮದಿಕ್ಕಿನಿಂದ ಬಂದನೋ ನಾವರಿಯೆವು. ಆದರೆ ಆತನು ತನ್ನ ಸ್ವದೇಶಕ್ಕೆ ಪ್ರಯಾಣಮಾಡಲು ಸಹಾಯ ನೀಡುವಂತೆ ನಮ್ಮನ್ನು ಪ್ರಾರ್ಥಿಸಿರುತ್ತಾನೆ. ಸಹಾಯಮಾಡಲು ನಮ್ಮ ಅಭ್ಯಂತರವಿಲ್ಲ. ಯಾಕೆಂದರೆ ನಮ್ಮ ಮನೆಗೆ ಅತಿಥಿಯಾಗಿ ಬಂದು ಅಸಂತೃಪ್ತರಾಗಿ ಯಾರೂ ಹೋದವರಿಲ್ಲ. ಆದುದರಿಂದ ಈತನಿಗೆ ಸಹಾಯ ಮಾಡುವುದು ನಮ್ಮ ಆಚಾರ; ನಮ್ಮ ಕರ್ತವ್ಯ. ನಾವು ಒಂದು ಹೊಸ ನೌಕೆಯನ್ನು ಈತನ ವಶಕ್ಕೊಪ್ಪಿಸಿ, ಐವತ್ತೆರಡು ಜನ ಹುಟ್ಟುಹಾಕುವವರನ್ನು ಸಂಗಡ ಕಳುಹಿಸೋಣ. ಹುಟ್ಟುಹಾಕುವುದರಲ್ಲಿ ಸಮರ್ಥರಾದವರು ಈಗಲೇ ಹೋಗಿ ನೌಕೆಯಲ್ಲಿ ಹುಟ್ಟುಗಳನ್ನು ಅಳವಡಿಸಿ, ಭೋಜನಕ್ಕೆ ಇಲ್ಲಿಗೇ ಬರಲಿ. ಭರ್ಜರಿ ಭೋಜನ ಏರ್ಪಡಿಸುವೆನು. ವಿನೋದವಾಗಿ ಹಾಡಲು ಸಂಗೀತಗಾರರನ್ನು ಕರೆಯಿಸೋಣ."

ಮಹಾಮೇಧಿ ಸಭಿಕರೊಂದಿಗೆ ಹೀಗೆ ಹೇಳಿ ರೂಪಧರನನ್ನು ಸಂಗಡ ಕರೆದುಕೊಂಡು ಅರಮನೆಗೆ ಹೊರಟನು. ಸಂಗೀತಗಾರರಿಗೆ ಸುದ್ದಿ ಕಳುಹಿಸಲಾಯಿತು. ಐವತ್ತೆರಡು ಜನ ಸಮರ್ಥರಾದ ನಾವಿಕರು ಹೊಸ ನೌಕೆಯನ್ನು ಜಲಪ್ರವೇಶಗೊಳಿಸಿ, ಹುಟ್ಟುಗಳನ್ನು ಅಳವಡಿಸಿದರು. ಅವರೊಂದು ಶುಭ್ರವಾದ ಶ್ವೇತ ತೆರೆಚಾಪೆಯನ್ನು ಕಟ್ಟಿ, ಲಂಗರು ಹಾಕಿ, ಭವನಕ್ಕೆ ಹಿಂತಿರುಗಿದರು.

ರಾಜಭವನದ ಕೊಠಡಿಗಳು, ಪಡಸಾಲೆ ಮತ್ತು ಪ್ರಾಂಗಣ ಅತಿಥಿಗಳಿಂದ ಕಿಕ್ಕಿರಿದು ತುಂಬಿತ್ತು. ಭೋಜನಕೂಟಕ್ಕಾಗಿ ಕಾಡುಹಂದಿ, ಕುರಿ ಮತ್ತು ಎತ್ತುಗಳನ್ನು ಹೊಡೆದಿದ್ದರು. ಭೋಜನಸಮಯದಲ್ಲಿ ಹಾಡಲು ಒಬ್ಬ ಅಂಧಗಾಯಕನನ್ನು ಕರೆಯಿಸಿದ್ದರು. ಎಲ್ಲರೂ ಭೋಜನಮಾಡುತ್ತಿದ್ದ ಸಮಯದಲ್ಲಿ ಆತನು ಹಾಡುತ್ತಿದ್ದ ಹಾಡು ರೂಪಧರನ



ಜೀವನದಲ್ಲಿ ನಡೆದ ಘಟನೆಯೊಂದಕ್ಕೆ ಸಂಬಂಧಿಸಿತ್ತು. ಆ ಅದರ ವಿವರಣೆ ಹೀಗಿತ್ತು:

ಟ್ರಾಯ್ ಯುದ್ಧ ಇನ್ನೂ ಆರಂಭವಾಗಿರಲಿಲ್ಲ. ರಾರಾಜನು ತನ್ನ ಭವಿಷ್ಯವನ್ನು ತಿಳಿದುಕೊಳ್ಳುವ ನಿಮಿತ್ತ ಮೈಥೋಬಳಿಯಿದ್ದ ಸೂರ್ಯಾಲಯಕ್ಕೆ ಹೋದನು.

"ಟ್ರಾಯ್ ಪತನವಾಗುವಷ್ಟರಲ್ಲಿ ನಿನ್ನ ಯೋಧರ ನಡುವೆ ಕಲಹವುಂಟಾಗುವುದು." ಎಂದು ಸೂರ್ಯಭಗವಾನನು ರಾರಾಜನಿಗೆ ತಿಳಿಸಿದನು. ಹಾಗೆಯೇ ಆಯಿತು. ಒಂದು ದಿನ ಊಟದಬಳಿ ರೂಪಧರ ಮತ್ತು ವಜ್ರಕಾಯರನಡುವೆ ಮಾತು ಬೆಳೆದು ಪರಸ್ಪರ ನಿಂದಿಸಿಕೊಂಡರು. ರಾರಾಜನು ಈ ಹೊಡೆದಾಟ ನೋಡಿ ಚಿಂತಿಸುವಬದಲು ಹರ್ಷಿತನಾದನು. ಇದು ತನಗೆ ಶುಭಸೂಚನೆಯೆಂದು ರಾರಾಜನು ಮೊದಲೇ ಅರಿತಿದ್ದನು. ಆರೀತಿ ಸೂರ್ಯಭಗವಾನನು ಹೇಳಿದ್ದನಷ್ಟೆ!

ಅಂಥ ಗಾಯಕನು ಭೋಜನಕೂಟದಲ್ಲಿ ಮೇಲಿನ ಸಂಘಟನೆಯನ್ನು ಹಾಡುಕಟ್ಟಿ ಹಾಡುತ್ತಿದ್ದನು. ಈ ಹಾಡು ಕೇಳುತ್ತಿದ್ದಂತೆ ರೂಪಧರನ ದುಃಖ ಉಮ್ಮಳಿಸಿಬಂತು. ತನ್ನ ಕಣ್ಣೀರನ್ನು ಇತರರು ನೋಡಬಹುದೆಂದು ಆತನು ತನ್ನ ಮುಖವನ್ನು ಕರವಸ್ತ್ರದಿಂದ ಮುಚ್ಚಿಕೊಂಡನು. ಮಧ್ಯೆಮಧ್ಯೆ ಗಾಯಕನು ಹಾಡು ನಿಲ್ಲಿಸಿದಾಗ ರೂಪಧರನು ಕಣ್ಣೀರ ನ್ನೊರಸಿಕೊಳ್ಳುತ್ತಿದ್ದನು. ಮತ್ತೆ ಗಾಯಕನು ಹಾಡನ್ನು ಪ್ರಾರಂಭಿಸಿದಕೂಡಲೇ ಆತನ



ಕಣ್ಣುಗಳಿಂದ ಅಶ್ರುಧಾರೆ ಸುರಿಯಲು ಮುಖ ಮುಚ್ಚಿಕೊಳ್ಳುತ್ತಿದ್ದನು. ರೂಪಧರನ ಈ ಬಗೆಯ ವಿಚಿತ್ರ ವರ್ತನೆಯನ್ನು ಆತನ ಪಕ್ಕದಲ್ಲೇ ಕುಳಿತಿದ್ದ ಮಹಾಮೇಧಿ ಗಮನಿಸುತ್ತಲೇ ಇದ್ದನು. ರೂಪಧರನು ಬಾದೆಯಿಂದ ಆಗಾಗ ನಿಟ್ಟುಸಿರಿಡುತ್ತಿರುವುದು ಆತನಿಗೆ ಸ್ಪಷ್ಟವಾಗಿ ಕೇಳಿಸಿತು.

ಮಹಾಮೇಧಿ ತನ್ನ ಅತಿಥಿಗಳೊಂದಿಗೆ "ಮಿತ್ರರೇ, ಎಲ್ಲರದೂ ಊಟವಾಯಿತು. ಇನ್ನು ಸಂಗೀತಮುಕ್ತಾಯವಾಗಲಿ. ವ್ಯಾಯಾಮ ಪ್ರದರ್ಶನ ನಡೆಯಲಿ. ಮಲ್ಲಯುದ್ಧದಲ್ಲೂ, ನೆಗೆಯುವುದರಲ್ಲೂ ನಮ್ಮ ಪ್ರಾವೀಣ್ಯತೆಯನ್ನು ತೋರಿಸೋಣ. ನಮ್ಮ ಅತಿಥಿ ಸ್ವದೇಶಕ್ಕೆ ಹೋಗಿ ತನ್ನ ಜನರಿಗೆ

ನಮ್ಮ ವಿಷಯ ಹೇಳ ಬಹುದು" ಎಂದ. ರಾಜನು ಎದ್ದು ನಿಂತಕೂಡಲೇ ಎಲ್ಲರೂ ಎದ್ದು ಮೈದಾನದಕಡೆಗೆ ಹೊರಟರು. ಅಲ್ಲಿ ಅನೇಕಸಾವಿರ ಜನ ಸೇರಿದ್ದರು. ವ್ಯಾಯಾಮ ಕ್ರೀಡೆಗಳಲ್ಲಿ ಪ್ರವೀಣರಾದ ಯುವಕರೆಲ್ಲ ವಿವಿಧ ಸ್ಪರ್ಧೆಗಳಲ್ಲಿ ಭಾಗವಹಿಸಲು ಸಿದ್ಧರಾಗುತ್ತಿದ್ದರು. ಮೊಟ್ಟಮೊದಲು ಓಟದ ಸ್ಪರ್ಧೆ ನಡೆಯಿತು. ತದನಂತರ ಮಲ್ಲಯುದ್ಧ ನೆಗೆದಾಟ, ಭಾರವಾದ ಗುಂಡು ಎಸೆತ ಮುಂತಾದ ಕ್ರೀಡೆಗಳು ನಡೆದುವು. ಪ್ರತಿ ಸ್ಪರ್ಧೆಯಲ್ಲೂ ತಲಾ ಒಬ್ಬೊಬ್ಬರು ಜಯಗೊಳಿಸಿದರು. ಮಲ್ಲಯುದ್ಧದಲ್ಲಿ ರಾಜಕುಮಾರನು ಜಯಗೊಳಿಸಿದನು. ಆತನು ತನ್ನ ಅನುಚರರೊಂದಿಗೆ "ಎಲೈ, ನಮ್ಮ ಮಾನ್ಯ ಅತಿಥಿ ಬಾಲ್ಯದಲ್ಲಿ ವ್ಯಾಯಾಮಕ್ರೀಡೆಗೆ ಶಕ್ತನಾಗಿರಬೇಕು. ವ್ಯಕ್ತಿಯನ್ನು ನೋಡಿದರೆ ಬಲಿಷ್ಠನಾಗಿದ್ದಾನೆ. ತೊಡೆ, ಪಕ್ಕಗಳು, ಕತ್ತುಬಲಿಷ್ಠವಾಗಿವೆ. ಕೈಗಳು ದೃಢವಾಗಿವೆ. ವಯಸ್ಸೂ ಸಹ ಹೆಚ್ಚಾಗಿರುವಂತೆ ತೋರದು" ಎಂದನು.

ರಾಜಕುಮಾರನೊಂದಿಗೆ ಅವನ ಸಂಗಡಿಗರು "ಭೇಷ್ ನೀನೇ ಹೋಗಿ ಆತನನ್ನು ಸ್ಪರ್ಧೆಗೆ ಆಹ್ವಾನಿಸು" ಎಂದರು.

ಆತನು ರೂಪಧರನನ್ನು ಸಮೀಪಿಸಿ "ಆರ್ಯಾ, ನಿಮಗೆ ವ್ಯಾಯಾಮಕ್ರೀಡೆಗಳ ಪರಿಚಯವಿರುವಾದರೆ ಆಡಲು ಬನ್ನಿ. ಪ್ರತಿ ಮಾನವನಿಗೂ ಕ್ರೀಡಾಭಿಲಾಷೆ ಯಿರಬೇಕು. ನೀವು ನಿರುತ್ಸಾಹಪಡಬೇಕಾಗಿಲ್ಲ. ನಿಮಗಾಗಿ ನೌಕೆ, ನಾವಿಕರು ಸಿದ್ಧರಾಗಿದ್ದಾರೆ" ಎಂದ.





"ಹಾಗೇಕೆ ಹೇಳುವಿರಿ. ನೀವೆಲ್ಲ ಸೇರಿ ನನ್ನನ್ನು ನಗೆಪಾಟಲಿಗೆ ಈಡುಮಾಡಲು ಯೋಚಿಸಿರುವಂತಿದೆ. ನಾನು ತುಂಬಾ ಸಂಕಷ್ಟಗಳಲ್ಲಿ ಸಿಲುಕಿರುವೆನು. ವಿನೋದ ವಿಲಾಸಗಳಮೇಲೆ ಆಸಕ್ತಿಯಿಲ್ಲ. ನಿಮ್ಮ ಅತಿಥಿಯಾಗಿರುವೆನಾದುದರಿಂದ ಈ ಆಟ ಪಾಟಗಳನ್ನು ವೀಕ್ಷಿಸುತ್ತಿರುವೆನೇ ಹೊರತು ನನಗೆ ಅವುಗಳಲ್ಲಿ ಇನಿತಿಷ್ಟೂ ಆಸಕ್ತಿಯಿಲ್ಲ. ಸ್ವಗೃಹವನ್ನು ಸೇರುವುದರಲ್ಲೇ ನನ್ನ ಮನಸ್ಸೆಲ್ಲಾ ಕೇಂದ್ರೀಕೃತವಾಗಿದೆ." ಎಂದು ರೂಪಧರನು ಮೆಲ್ಲನುಸಿರಿದನು.

ಆತನನ್ನು ರೊಚ್ಚಿಗೆಬ್ಬಿಸುವ ಉದ್ದೇಶದಿಂದ ಇನ್ನೊಬ್ಬ ಯುವಕನು ರೂಪಧರನನ್ನು ಉದ್ದೇಶಿಸಿ "ಸರಿಬಿಡಿ. ನಿಮ್ಮ ಅವತಾರವೇ ಹೇಳುತ್ತಿದೆ. ವ್ಯಾಯಾಮಕ್ರೀಡೆಗಳೆಲ್ಲಿ ಬರಬೇಕು. ಯಾವುದೋ ವರ್ತಕರ ನೌಕೆಯನ್ನು ನಡೆಯಿಸಿಕೊಂಡು, ಬೇಲು ಲೆಕ್ಕವಿಟ್ಟು, ಜಮಾಖರ್ಚಿನ ಪಟ್ಟಿ ಬರೆದು, ಲಾಭ ಸಂಪಾದಿಸುವುದರ ಹೊರತಾಗಿ ಮತ್ತೇನೂ ತಿಳಿದಂತೆ ತೋರದು" ಎಂದು ಲಘುವಾಗಿ ನುಡಿದನು.

ಈಸಾರಿ ರೂಪಧರನಿಗೆ ನಿಜವಾಗಿ ಕೋಪ ಬಂದಿತು. ಆತನು ಹುಬ್ಬುಗಂಟು ಹಾಕಿ "ತಮ್ಮಾ, ಕೆಲವರನ್ನು ಭಗವಂತನು ವಿಕಾರವಾಗಿ ಸೃಷ್ಟಿಸುವನು. ಆದರೆ ಅವರು ಬಾಯಿ ತೆರೆದರೆ ಮುತ್ತುಗಳು ಉದುರುತ್ತವೆ. ಅವರ ಮಾತು ಕೇಳಲು ಪ್ರಜೆಗಳು ಗುಂಪುಗೂಡುತ್ತಾರೆ. ಮತ್ತೆ ಕೆಲವರು ನೋಡಲು ಅಂದ

ವಾಗಿರುತ್ತಾರೆ. ಬಾಯಿಬಿಟ್ಟರೆ ಜನ ಕಿವಿ ಮುಚ್ಚಿಕೊಳ್ಳುತ್ತಾರೆ. ಭಗವಂತನು ನಿನಗೆ ಅಂದವನ್ನು ಕೊಟ್ಟಿರುವನೇ ಹೊರತು, ಬುದ್ಧಿ ಕೊಟ್ಟಿಲ್ಲ. ನಾನು ನಾನಾ ಕಷ್ಟಗಳಿಗೆ ಸಿಕ್ಕಿ ತೀರಾ ಹತಾಶನಾಗಿದ್ದೇನೆ. ಆದರೂ ನನಗಿರುವ ಶಕ್ತಿ ನಿಮಗೆ ತೋರಿಸುವೆನು" ಎಂದು ತಟಕ್ಕನೆದ್ದು ಬಂದು, ಭಾರಿ ಗುಂಡು ತೆಗೆದು ತಲೆಮೇಲೆ ಒಮ್ಮೆ ತಿರುಗಿಸಿ, ಬಲವನ್ನೆಲ್ಲಾ ಪ್ರಯೋಗಿಸಿ ಎಸೆದನು.

ತಟ್ಟಿಹಿಡಿದು ಅಳೆಯುವ ಹುಡುಗನು ಆ ಗುಂಡು ಬಿದ್ದಕಡೆ ಅಳೆದು "ಭಳಿರೆ, ಅಯ್ಯಾ, ಉಳಿದೆಲ್ಲರಿಗಿಂತ ನೀವು ಗುಂಡನ್ನು ಹೆಚ್ಚು ದೂರ ಎಸೆದಿರುವಿರಿ. ಇಷ್ಟುದೂರ ಮತ್ತೆ ಯಾರೂ ಎಸೆಯಲಾರರು. ನೀವು ನಿಶ್ಚಿಂತರಾಗಿರಿ" ಎಂದು ಕೂಗಿ ಹೇಳಿದನು.

ರೂಪಧರನಿಗೆ ಈ ಮಾತು ಕೇಳಿ ತುಸ ಆನಂದವಾಯಿತು. ಆತನು ಉತ್ಸಾಹದಿಂದ "ಯುವಕರೇ, ನಿಮ್ಮ ಕೈಯಲ್ಲಿ ಸಾಧ್ಯವಾದರೆ ನನ್ನೊಂದಿಗೆ ಸ್ಪರ್ಧೆಹೂಡಿ ಗುಂಡು ಎಸೆಯಿರಿ. ಒಮ್ಮೆ ಸ್ಪರ್ಧೆಗೆ ಇಳಿದ ನಾನು ಹಿಂದೆಜ್ಜೆಯಿಡಲಾರೆ. ಮಲ್ಲಯುದ್ಧವಾದರೂ ಸರಿ, ಓಟವಾದರೂ ಸರಿ, ಯಾರು ಬರುವಿರೋ ಬನ್ನಿ. ನನಗೆ ಬಿಲ್ಲುವಿದ್ಯೆ ಸಹ ಬರುತ್ತದೆ. ಆ ವಿದ್ಯೆಯಲ್ಲಿ ನನಗಿಂತಲೂ ಸಮರ್ಥನಾದವನು ಧನಧವನೊಬ್ಬನಿದ್ದ. ದೇವತೆಗಳಮಾತು ಹೇಳಲಾರೆ. ಆದರೆ ಮಾನವಮಾತ್ರರೊಂದಿಗೆ ಯಾರಾದರಾಗಲೀ,




ಯಾವವಿದ್ಯೆಯಾಗಲೀ ನಾನು ಸವಾಲು ಹಾಕುತ್ತೇನೆ" ಎಂದನು. ಅಲ್ಲಿ ನೆರೆದಿದ್ದವರು ಯಾರೂ ಮಾತನಾಡಲಿಲ್ಲ.

ಆಗ ಮಹಾಮೇಧಿ ರೂಪಧರನನ್ನು ಕುರಿತು "ವೀರಪುರುಷನೇ, ನಮ್ಮನ್ನು ಅನ್ಯರು ಕ್ಷುಲ್ಲಕವಾಗಿ ಮಾತನಾಡಿದಾಗ ನಮ್ಮ ದೊಡ್ಡಸ್ತಿಕೆಯನ್ನು ತಿಳಿಸುವುದು ತಪ್ಪಲ್ಲ. ನಿಮ್ಮ ಶಕ್ತಿಸಾಮರ್ಥ್ಯಗಳನ್ನು ಶಂಕಿಸುವ ಅರ್ಹತೆ ಇಲ್ಲಿ ಯಾರಿಗೂ ಇಲ್ಲ. ನೀವು ಇಲ್ಲಿರುವಷ್ಟು ದಿನ ಆನಂದದಿಂದ ಇರಬೇಕೆಂದು ನಮ್ಮ ಉದ್ದೇಶ. ಕೆಲವು ವಿದ್ಯೆಗಳಲ್ಲಿ ನಾವು ಪ್ರವೀಣರು. ಮಲ್ಲಯುದ್ಧವೇ ಮುಂತಾದ ವ್ಯಾಯಾಮಕ್ರೀಡೆಗಳಲ್ಲಿ ನಮಗೆ ಪ್ರತ್ಯೇಕ ಅನುಭವವಿಲ್ಲ. ನಾವು ನೌಕಾ

ನಿರ್ಮಾಣದಲ್ಲಿ, ನೌಕೆ ನಡೆಸುವುದರಲ್ಲಿ, ನಾಟ್ಯದಲ್ಲಿ ಪ್ರಾವೀಣ್ಯತೆ ಪಡೆದಿರುವೆವು. ನೀವು ಇವುಗಳನ್ನು ನೋಡಿ ಆನಂದಿಸಬೇಕೆಂದು ನಮ್ಮ ಕೋರಿಕೆ. ಸ್ವಗೃಹವನ್ನು ಸೇರಿಕೊಂಡ ನಂತರ ನಿಮ್ಮ ಮಡದಿಮಕ್ಕಳೊಂದಿಗೆ ಕುಳಿತಿರುವಾಗ ನಮ್ಮನ್ನು ನೆನೆಸಿಕೊಳ್ಳಬೇಕೆಂದು ನಮ್ಮ ಹಾರೈಕೆ" ಎಂದನು.

ತರುವಾಯ ನೃತ್ಯಗಾನಗಳನ್ನು ಏರ್ಪಡಿಸಿದರು. ಆ ದೇಶಸ್ಥರು ಮಾಡಿದ ಬೃಂದ ನೃತ್ಯವನ್ನು ನೋಡಿ ರೂಪಧರನು ಆನಂದ ಭರಿತನಾದನು. ಆತನು ಮಹಾಮೇಧಿಯೊಂದಿಗೆ "ಮಹಾರಾಜ, ಇಂತಹ ಅದ್ಭುತ ನೃತ್ಯಗಳನ್ನು ನಾನೆಲ್ಲೂ ನೋಡಿರಲಿಲ್ಲ" ಎಂದನು. ತನ್ನ ಅತಿಥಿ ಹಾಗೆ ಹೇಳಲು ಮಹಾರಾಜನು ಹರ್ಷಿತನಾದನು. ಆತನು ತನ್ನ ದೇಶದಲ್ಲಿದ್ದ ಹನ್ನೆರಡು ಜನ ರಾಜಕುಮಾರರನ್ನು ಕರೆಯ ಕಳುಹಿಸಿ, ಅವರಿಂದ ತನ್ನ ಅತಿಥಿಗೆ ದಿವ್ಯವಸ್ತ್ರಗಳನ್ನು ಕೊಡಿಸಿ, ಯಥೇಚ್ಛವಾಗಿ ಧನವನ್ನು ಬಹುಮಾನವಾಗಿ ಕೊಟ್ಟನು. ರೂಪಧರನನ್ನು ರೊಚ್ಚಿಗೆಬ್ಬಿಸಿದ ಯುವಕನು ಬಿಳಿಬಾಳುವ ದಂತದ ಒರೆ ಮತ್ತು ಬೆಳ್ಳಿಯ ಹಿಡಿಯುಳ್ಳ ಖಡ್ಗವನ್ನು ರೂಪಧರನಿಗೆ ಬಹುಮಾನವಾಗಿ ಕೊಟ್ಟನು.

ಅಂದುರಾತ್ರಿ ಭೋಜನ ಸಮಯದಲ್ಲಿ ಅಂಧಗಾಯಕನು 'ಮರದ ಅಶ್ವ'ದ ಕಥೆಯನ್ನು ಹಾಡುಕಟ್ಟಿ ಹಾಡಿದನು. ಗ್ರೀಕರು ತಮ್ಮ ಶಿಬಿರಕ್ಕೆ ಬೆಂಕಿಹಚ್ಚಿ, ತಮ್ಮ ನೌಕೆಗಳಲ್ಲಿ ಹೊರಟುಹೋದಾರಭ್ಯದಿಂದ ಕಥೆ ಆರಂಭವಾಯಿತು. ತರುವಾಯ ಟ್ರೋಜನರು ಮರದಕುದುರೆಯನ್ನು ನಗರಕ್ಕೆ ತೆಗೆದುಕೊಂಡು ಹೋಗುವುದು, ಇತ್ಯಾದಿ ವಿವರಗಳನ್ನು ಕೇಳಿ ರೂಪಧರನು ಕಣ್ಣೀರಿಟ್ಟನು.

ಅದನ್ನು ಗಮನಿಸಿದ ಮಹಾಮೇಧಿ ಹಾಡನ್ನು ನಿಲ್ಲಿಸುವಂತೆ ಹೇಳಿ, ರೂಪಧರನನ್ನು ಕುರಿತು "ಅಯ್ಯಾ, ಮರೆಮಾಚದೆ ನಿಜ ಹೇಳಿ. ನೀವು ಯಾರು? ನಿಮ್ಮ ದೇಶ ಯಾವುದು? ಟ್ರಾಯ್ ಯುದ್ಧ ಕಥೆ ನಿಮ್ಮನ್ನೇಕೆ ಕಳವಳಪಡಿಸುವುದು? ಆ ಯುದ್ಧದಲ್ಲಿ ನಿಮ್ಮ ಆಪ್ತರು ಯಾರಾದರೂ ಮರಣಪಟ್ಟರೇ?" ಎಂದು ಕೇಳಿದನು. [ಇನ್ನೂ ಇದೆ]






## 7

[ರಾಜಕುಮಾರಿ ಬುದೂರ್ ಮತ್ತು ಮಂತ್ರಿಯ ಮಗನಿಗೆ ಜರುಗಬೇಕಾದ ವಿವಾಹವನ್ನು ಅಲ್ಲಾದೀನನು ಯಾರೊಬ್ಬರಿಗೂ ತಿಳಿಯದಂತೆ ಭಗ್ನಗೊಳಿಸಿ, ರಾಜನಿಟ್ಟ ಅವಧಿ ಮುಗಿದ ಕೂಡಲೇ, ರಾಜಕುಮಾರಿಯನ್ನು ತನಗಿತ್ತು ವಿವಾಹಮಾಡಬೇಕೆಂದು ತಾಯಿಯೊಂದಿಗೆ ಸುದ್ದಿ ಕಳುಹಿಸಿದನು. ಮಂತ್ರಿಯ ಸಲಹೆಯಮೇರೆಗೆ ರಾಜನು ತನ್ನ ಮಗಳಿಗೆ ಅಪೂರ್ವವೂ ಅಮೂಲ್ಯವೂ ಆದ ರತ್ನರಾಶಿಯನ್ನು ಕಾಣಿಕೆಯಾಗಿ ಕೊಡಬೇಕೆಂದು ಹೇಳಿದನು. ದೀಪದ ಭೂತದ ಸಹಾಯದಿಂದ ಅಲ್ಲಾದೀನನು ಕಾಣಿಕೆ ಕಳುಹಿಸಿಕೊಟ್ಟನು. ತರುವಾಯ ರಾಜನು ಅಲ್ಲಾದೀನನಿಗೆ ಅಭೂತಪೂರ್ವ ಸ್ವಾಗತನೀಡಿದನು.]

ರಾಜಭವನದಲ್ಲಿ ರಾಜನಿಗೂ ಅಲ್ಲಾದೀನನಿಗೂ ಭೋಜನದ ವ್ಯವಸ್ಥೆ ಮಾಡಲಾಗಿತ್ತು. ಮಂತ್ರಿ ತಾನೇ ಅವರಿಗೆ ಪರಿಚರ್ಯೆ ಮಾಡಿದನು. ಉಳಿದ ಸಭಿಕರೂ ಅಲ್ಲೇ ಇದ್ದರು.

ಭೋಜನ ಮುಗಿದಕೂಡಲೇ ರಾಜನು ಪುರೋಹಿತರನ್ನು ಕರೆಯಿಸಿ ತನ್ನ ಮಗಳನ್ನು ಅಲ್ಲಾದೀನನಿಗೆ ಕೊಟ್ಟು ವಿವಾಹಮಾಡುವ ಕರಾರುಪತ್ರ ಬರೆಯಿಸಿದನು. ತರುವಾಯ ಆತನು ಅಲ್ಲಾದೀನನೊಂದಿಗೆ "ಮಗನೇ, ಮುಹೂರ್ತವನ್ನು ಎಂದಿಗೆ ಇಟ್ಟುಕೊಳ್ಳೋಣ" ಎಂದು ಕೇಳಿದನು.

"ಮಹಾರಾಜ, ಮುಹೂರ್ತ ಈಗಲೇ ಇಟ್ಟುಕೊಂಡರೂ ನನಗೆ ಸಮ್ಮತವೇ. ಆದರೆ ನನ್ನ ಹೆಂಡತಿಯೊಂದಿಗೆ ಸಂಸಾರ ಹೂಡುವ ಮೊದಲು ಅದ್ಭುತವಾದ ಭವನವೊಂದನ್ನು ನಿರ್ಮಿಸಬೇಕೆಂಬ ಉದ್ದೇಶವಿದೆ. ಆ ಭವನ

ಎಸ್. ಪ್ರತಿಭಾಕುಮಾರಿ



ಸಿದ್ಧವಾದಕೂಡಲೇ ನಾನು ವಿವಾಹಮಾಡಿಕೊಳ್ಳುವೆನು" ಎಂದ ಅಲ್ಲಾದೀನ್.

"ಈ ಭವನವನ್ನು ಎಲ್ಲಿ ನಿರ್ಮಿಸಲು ಯೋಚಿಸಿರುವೆ?" ರಾಜನು ಕೇಳಿದನು.

"ತಮ್ಮ ಅಪ್ಪಣೆಯಾದರೆ ರಾಜಭವನದ ಎದುರು ವಿಶಾಲವಾಗಿರುವ ಆವರಣದಲ್ಲಿ ಕಟ್ಟಿಸುವೆನು. ನಿಮ್ಮ ಮಗಳು ನಿಮ್ಮ ಸಮೀಪದಲ್ಲಿದ್ದರೆ ಉತ್ತಮವಲ್ಲವೇ? ನಾನೂ ಸಹ ಆಗಿಂದಾಗ್ಗೆ ತಮ್ಮ ದರ್ಶನಭಾಗ್ಯವನ್ನು ಪಡೆಯಬಹುದು" ಎಂದ ಅಲ್ಲಾದೀನ್.

"ಇದಕ್ಕೆ ನನ್ನ ಅನುಮತಿ ಕೇಳಬೇಕೇ? ನಿನ್ನಿಷ್ಟಬಂದಕಡೆ ಭವನವನ್ನು ಕಟ್ಟಿಸು. ಆದರೆ ಆ ಕೆಲಸ ಬೇಗ ಮುಗಿಯಲಿ. ನನ್ನ ಮಗಳ ವಿವಾಹವಾಗಿ, ಅವಳ ಮಕ್ಕಳನ್ನು ಎತ್ತಿಕೊಂಡು ಆಡಿಸಲು ನಾನು ತುಂಬಾ ಕುತೂಹಲದಿಂದಿರುವೆನು" ಎಂದ ರಾಜ.

ಅಲ್ಲಾದೀನನು ರಾಜನ ಮಾತು ಕೇಳಿ ನಸುನಕ್ಕು, ಆತನಿಂದ ಅಪ್ಪಣೆಪಡೆದು ತನ್ನ ಮನೆ ಸೇರಿಕೊಂಡನು. ಮನೆ ಸೇರಿಕೊಂಡ ಕೂಡಲೇ ತಾಯಿಯೊಂದಿಗೆ ನಡೆದ ವಿಷಯವನ್ನೆಲ್ಲಾ ತಿಳಿಸಿ, ತನ್ನ ಕೋಣೆಗೆ ಹೋಗಿ ಕದ ಮುಚ್ಚಿ, ದೀಪವನ್ನು ಉಜ್ಜಿದನು. ಕೂಡಲೇ ಭೂತ ಪ್ರತ್ಯಕ್ಷವಾಯಿತು. ಭೂತ "ಏನಪ್ಪಣೆ ಜೀಯಾ?" ಎಂದು ಕೇಳಿತು.

"ನನ್ನ ಅಭೀಷ್ಟಗಳನ್ನು ನೆರವೇರಿಸುವುದರಲ್ಲಿ ನೀನು ತುಂಬಾ ಚಾಕಚಕ್ಯತೆಯನ್ನು ತೋರಿರುವೆ. ಈಸಾರಿ ಮತ್ತಷ್ಟು ದಕ್ಷತೆ ತೋರಿಸಬೇಕು. ನಾನೂ ನನ್ನ ಹೆಂಡತಿಯೂ ಸಂಸಾರಹೂಡಲು ಒಂದು ಅದ್ಭುತವಾದ ಭವನವನ್ನು ಅರಮನೆಗೆದುರಾಗಿರುವ ವಿಶಾಲವಾದ ಬಯಲಿನಲ್ಲಿ ನಿರ್ಮಿಸು. ಅದರ ನಿರ್ಮಾಣಕಾರ್ಯದ ವಿವರಗಳನ್ನೆಲ್ಲಾ ನಿನ್ನ ಪಾಲಿಗೆ ಬಿಡುತ್ತೇನೆ. ಎಲ್ಲೆಲ್ಲಿ ಯಾವ ಯಾವ ರತ್ನಗಳನ್ನು ಹುದುಗಿಸಬೇಕೋ ನೀನೇ ತಿರ್ಮಾನಿಸು. ಆದರೆ ಭವನದಮಧ್ಯೆ ಸ್ಪಟಿಕದಿಂದ ಒಂದು ಬುರುಜು ಅತಿದೊಡ್ಡದಾಗಿರಬೇಕು. ಅದಕ್ಕೆ ಅಳವಡಿಸುವ ಸ್ತಂಭಗಳು ಚಿನ್ನದಿಂದ ಎರಕಹೊಯ್ದಹಾಗೆ ಕಾಣಬೇಕು. ಆ ಬತ್ತೇರಿಗೆ ತೊಂಬತ್ತೊಂಬತ್ತು ಗವಾಕ್ಷಿಗಳಿರಬೇಕು. ಅವುಗಳಿಗೆ ವಜ್ರ, ಕೆಂಪು, ಪಚ್ಚೆ, ಗೋಮೇಧಿಕಾ ಮುಂತಾದ ನವರತ್ನ



ಗಳನ್ನು ಜೋಡಿಸಬೇಕು. ಆದರೆ ಒಂದೇ ಒಂದು ಕಿಟಕಿಯನ್ನು ಮಾತ್ರ ಅಲಂಕರಿಸ ಬೇಡ. ಭವನದಮುಂದೆ ಜಲಯಂತ್ರಗಳು, ಕಾರಂಜಿಗಳು, ರಮ್ಯವಾದ ಉದ್ಯಾನಗಳು ಇರಬೇಕು. ಭವನದ ರಹಸ್ಯನೆಲಮಾಳಿಗೆ ಯಲ್ಲಿ ಧನರಾಶಿ ತುಂಬಿರಬೇಕು. ಇನ್ನು ಅಶ್ವ ಶಾಲೆ, ಪಾಕಶಾಲೆ, ಊಳಿಗದವರ ವಸತಿ ಗೃಹಗಳನ್ನು ನಿನ್ನಿಷ್ಟಪ್ರಕಾರ ಕಟ್ಟಿಸು. ಕೆಲಸ ಮುಗಿದಕೂಡಲೇ ನನಗೆ ಬಂದು ತಿಳಿಸು'' ಎಂದ ಅಲ್ಲಾದೀನ್. "ಅಪ್ಪಣೆ'' ಎಂದು ಹೇಳಿ ಭೂತ ಅದೃಶ್ಯವಾಯಿತು.

ಮಾರನೇಯ ದಿನ ಬೆಳಗಿನಜಾವ ಭೂತ ಅಲ್ಲಾದೀನನನ್ನು ನಿದ್ರೆಯಿಂದ ಎಬ್ಬಿಸಿ "ತಾವು ಹೇಳಿದ ಕೆಲಸ ಪೂರ್ತಿಯಾಯಿತು. ಬಂದು ನೋಡಿ'' ಎಂದಿತು.

ಅವನು ಸಿದ್ಧನಾದಕೂಡಲೇ ಭೂತ ಅವ ನನ್ನು ಎತ್ತಿಕೊಂಡು ಹೋಗಿ ನೂತನ ಭವನ ವನ್ನು ತೋರಿಸಿತು. ಆ ಮಂದಿರ ರಾಜಭವ ನಕ್ಕೆದುರಾಗಿ, ಅದಕ್ಕಿಂತಲೂ ಹೆಚ್ಚು ಶೋಭಾಯಮಾನವಾಗಿತ್ತು. ಭವನಕ್ಕೆ ಹೋಗಲು ಎರಡು ಮಾರ್ಗಗಳಿದ್ದುವು. ಆ ಮಾರ್ಗಕ್ಕೆ ಅಮೃತಶಿಲೆಗಳನ್ನು ಹಾಕ ಲಾಗಿತ್ತು. ಭವನದ ಬಾಹ್ಯಸೌಂದರ್ಯವನ್ನು ನೋಡಿದನಂತರ ಅಲ್ಲಾದೀನನು ಭೂತದೊಂ ದಿಗೆ ಒಳಗೆ ಪ್ರವೇಶಿಸಿದನು. ಅವನು ತನ್ನ ಕನಸಿನಲ್ಲೂ ಕಾಣದ, ಊಹಿಸದ ಮಹಾ ವೈಭವ ಪ್ರತ್ಯಕ್ಷವಾಯಿತು. ನೆಲಮಾಳಿಗೆಯಲ್ಲಿ




ಒಂದು ವಿಶಾಲವಾದ ಧನಾಗಾರ ನಿರ್ಮಿಸ ಲಾಗಿತ್ತು. ಅದರ ತುಂಬಾ ಚಿನ್ನದ ದೀನಾರ ಗಳು ತುಂಬಿದ ಥೈಲಿಗಳಿದ್ದುವು. ಅರಮನೆ ಯಲ್ಲಿರುವಂತೆ ಪಾಕಶಾಲೆ, ಅಶ್ವಶಾಲೆ, ಕಛೇರಿ ಚಾವಡಿ ಇತ್ಯಾದಿಗಳು ಆ ಭವನದಲ್ಲಿದ್ದುವು. ಅಶ್ವಶಾಲೆಯಲ್ಲಿ ಉತ್ತಮ ಜಾತಿಯ ಅಶ್ವಗ ಳಿದ್ದುವು. ಅವುಗಳಿಗೆ ನೌಕರರು ಮಾಲೀಸು ಮಾಡುತ್ತಿದ್ದರು. ದಾಣ ಹಾಕಲು ಬೆಳ್ಳಿಯ ಹರಿವಾಣಗಳಿಟ್ಟಿದ್ದರು. ಇದನ್ನು ನೋಡಿ ಅಲ್ಲಾದೀನನು ಬಹಳ ಸಂತೋಷಪಟ್ಟನು. ಅವನು ಭೂತದಕಡೆ ತಿರುಗಿ "ಒಂದು ವಿಷಯಮಾತ್ರ ಮರೆತುಹೋದೆ. ನನ್ನ ಹೆಂಡತಿ ನನ್ನ ಗೃಹದಿಂದ ರಾಜಭವನಕ್ಕೆ ನಡೆದುಕೊಂಡು ಹೋಗುವಳು. ಈ ಎರಡು





ಭವನಗಳ ನಡುವೆಯಿರುವ ಮಾರ್ಗಕ್ಕೆ ಒಂದು ಉದ್ದನೆಯ ರತ್ನಗಂಬಳಿಯನ್ನು ಹಾಕಿಸು" ಎಂದ. "ಅಪ್ಪಣೆ" ಎಂದಿತು ಭೂತ. ಮರು ಕ್ಷಣವೇ ಎರಡು ಭವನಗಳ ನಡುವೆ ಮೆತ್ತನೆಯ ತಿವಾಸಿ ಹರಡಿತ್ತು.

"ಈಗ ಎಲ್ಲವೂ ಸಮರ್ಪಕವಾಗಿದೆ. ಇನ್ನು ನನ್ನನ್ನು ನಮ್ಮ ಮನೆಗೆ ಕರೆದುಕೊಂಡು ಹೋಗು" ಎಂದ ಅಲ್ಲಾದೀನ್.

ಅವನು ಹೊರಟುಹೋದ ಕೊಂಚಹೊತ್ತಿಗೆ ಅರಮನೆಯ ಮಹಾದ್ವಾರ ತೆರೆಯಿತು. ರಾಜಭಟರು, ಗುಲಾಮರು ತಮ್ಮ ತಮ್ಮ ಕೆಲಸ ಕಾರ್ಯಗಳಮೇಲೆ ರಾಜಭವನದಿಂದ ಹೊರಗೆ ಬಂದು, ಎದುರುಗಿದ್ದ ಭವ್ಯಭವನವನ್ನು ಕಂಡು ಆಶ್ಚರ್ಯಚಕಿತರಾದರು. ಆ ಭವನ ಮಣಿಮಾಣಿಕ್ಯಗಳ ಕಾಂತಿಯಿಂದ, ಆಗಲೇ ಉದಯಿಸಿದ ಸೂರ್ಯಬಿಂಬದಂತೆ ದೇದೀಪ್ಯಮಾನವಾಗಿ ಪ್ರಜ್ವಲಿಸುತಿತ್ತು. ಅವರು ಹಿಂದಕ್ಕೆ ಹೋಗಿ ಈ ವಿಷಯವನ್ನು ಮಂತ್ರಿಗೆ ತಿಳಿಸಿದರು. ಅವನು ಮಹಾರಾಜನ ಬಳಿಗೆ ಹೋಗಿ "ಮಹಾಪ್ರಭು, ರಾಜಕುಮಾರಿಯನ್ನು ವಿವಾಹವಾಗುವ ಯುವಕನು ಇಂದ್ರಜಾಲ ಮಹೇಂದ್ರಜಾಲಗಳನ್ನು ಅರಿತಿರುವಂತಿದೆ" ಎಂದನು.

"ನೀನೊಬ್ಬ ಮೂರ್ಖ. ಅಸೂಯೆಯಿಂದ ನಿನ್ನ ಬುದ್ಧಿ ವಕ್ರವಾಗಿದೆ. ಅಂಥ ಧನಿಕನು ನೆನೆಸಿದರೆ ಒಂದು ರಾತ್ರಿಯಲ್ಲಿ ಇಂತಹ ಭವನವನ್ನು ಕಟ್ಟಿಸಲಾರನೆ?" ಎಂದ. ರಾಜನಿಗೆ ಅಲ್ಲಾದೀನನಮೇಲೆ ಸಂಪೂರ್ಣ



ನಂಬಿಕೆಯಿರುವುದೆಂದು, ಅವನಮೇಲೆ ಏನು ಹೇಳಿದರೂ ರಾಜನಿಗೆ ಸರಿಬೀಳದೆಂದು ಮಂತ್ರಿ ಗ್ರಹಿಸಿ, ಮೌನತಾಳಿದನು.

ಅಲ್ಲಾದೀನನು ಮನೆಗೆ ಸೇರಿದಕೂಡಲೇ ತನ್ನ ತಾಯಿಯನ್ನು ನಿದ್ರೆಯಿಂದ ಎಬ್ಬಿಸಿದನು. ಆಕೆಗೆ ದಿವ್ಯವಾದ ದಿರುಸುಗಳನ್ನು ಉಡಿಸುವಂತೆ ಪರಿಚಾರಿಕೆಯರಿಗೆ ಆಜ್ಞೆಮಾಡಿದನು. ಆಕೆ ಪ್ರಯಾಣಕ್ಕೆ ಸಿದ್ಧಳಾದಕೂಡಲೇ "ಅಮ್ಮಾ, ಇನ್ನು ನಿನ್ನ ಸೊಸೆಯನ್ನು ಮನೆಗೆ ತಂದುಕೊಳ್ಳಬಹುದು. ನಡಿ ಹೋಗೋಣ" ಎಂದ.

ಅಲ್ಲಾದೀನನ ತಾಯಿ ತನ್ನ ಹನ್ನೆರಡು ಜನ ದಾಸಿಯರನ್ನು ಸಂಗಡ ಕರೆದುಕೊಂಡು ರಾಜಭವನಕ್ಕೆ ಹೊರಟಳು. ಆಕೆಗೆ ಸ್ವಲ್ಪ ಹಿಂದೆ ಅಲ್ಲಾದೀನನು ತನ್ನ ಕುದುರೆಯ ಮೇಲೆ ಹೊರಟನು ಅವನೊಂದಿಗೆ ಅವನ ಸಿಬ್ಬಂದಿಸಹ ಹೊರಟಿತು. ರಾಜಭವನ ತಲುಪಿದಕೂಡಲೇ ಅಲ್ಲಾದೀನನು ತನ್ನ ಸ್ವಂತ ಭವನದಕಡೆ ಹೊರಟನು. ಅವನ ತಾಯಿ ರಾಜಭವನವನ್ನು ಪ್ರವೇಶಿಸಿದಳು.

ರಾಜನು ಆಕೆಗೆ ಆದರದ ಸ್ವಾಗತನೀಡಿದನು. ನೌಕರರನ್ನು ಕೂಗಿ ಆಕೆಯನ್ನು ರಾಣಿವಾಸಕ್ಕೆ ಕರೆದೊಯ್ಯುವಂತೆ ಆಜ್ಞಾಪಿಸಿದನು. ಅತ್ತೆಯನ್ನು ಕಂಡಕೂಡಲೇ ರಾಜಕುಮಾರಿ ಎದ್ದು ಬಂದು ಅತಿವಿನಯದಿಂದ ಆಕೆಯನ್ನು ಉಚಿತಾಸನದಲ್ಲಿ ಕೂರಿಸಿ, ಉಪಾಹಾರನೀಡಿದ ನಂತರ ತಾನು ಶೃಂಗರಿಸಿಕೊಳ್ಳಲಾರಂಭಿಸಿದಳು. ದಾಸಿಯರು ರಾಜಕುಮಾರಿಯನ್ನು







ಮುಂದೆ ಹೇಳಲು ಅವರಿಗೆ ಧೈರ್ಯವಿರಲಿಲ್ಲ. ರಾಜಕುಮಾರಿ ಗಂಡನಮನೆಗೆ ಹೊರಟಾಗ ತನ್ನ ತಂದೆತಾಯಿಯರನ್ನು ಅಪ್ಪಿಕೊಂಡು ಕಣ್ಣೀರು ಸುರಿಸಿದಳು. ತರುವಾಯ ಆಕೆ ತನ್ನ ಅತ್ತೆಯೊಂದಿಗೆ ಹೊರಟಳು. ಆಕೆ ಯೊಂದಿಗೆ ಹತ್ತುಮಂದಿ ನೌಕರರು, ನೂರು ಜನ ದಾಸಿಯರು ಹೊರಟರು. ನಾನೂರು ಗುಲಾಮರು ಎರಡು ಭವನಗಳಮಧ್ಯೆಯಿದ್ದ ಮಾರ್ಗದ ಇಕ್ಕಡೆಗಳಲ್ಲಿ ಸಾಲಾಗಿ ನಿಂತರು. ಅವರ ಕೈಯಲ್ಲಿದ್ದ ತಟ್ಟೆಗಳಲ್ಲಿ ಧೂಪದೀಪಗ ಳಿದ್ದುವು. ಮಂಗಳ ವಾದ್ಯಗಳು ಮೊಳಗು ತ್ತಿರಲು, ಮದುಮಗಳು ತಿವಾಸಿಯಮೇಲೆ ಅಡಿಯಿಡುತ್ತ ತೌರುಮನೆಯಿಂದ ಮಾವನ ಮನೆಗೆ ನಡೆದಳು. ಈ ದೃಶ್ಯವನ್ನು ನೋಡು ತ್ತಿದ್ದ ಜನ ಹರ್ಷಧ್ವನಿಗೈದರು.

ಅಲ್ಲಾದೀನನು ಕಿರುನಗೆಬೀರುತ್ತಾ ಮದು ಮಗಳನ್ನು ಎದುರುಗೊಂಡು, ಆಕೆಯ ಕೈ ಹಿಡಿದು ಒಳಗೆ ಕರೆದುಕೊಂಡು ಹೋದನು. ಬುರುಜಿನಕೆಳಗಿದ್ದ ಪಡಸಾಲೆಯಲ್ಲಿ, ರತ್ನಗಳು ಹುದುಗಿದ್ದ ಕಿಟಕಿಗಳನಡುವೆ ಅಲ್ಲಾದೀನ್, ಅವನತಾಯಿ ಮತ್ತು ರಾಜಕುಮಾರಿ ಭೋಜ ನಕ್ಕೆ ಕುಳಿತರು. ಆ ಭವನದ ವಾತಾವರಣ ವನ್ನೆಲ್ಲಾ ನೋಡಿ ರಾಜಕುಮಾರಿ ಬೆರಗಾ ದಳು. ತಾನು ಅಂತಹ ಸ್ಥಳವನ್ನು ಸೇರುವೆ ನೆಂದು ಆಕೆ ಎಂದೂ ಊಹಿಸಿರಲಿಲ್ಲ.

ಭೋಜನ ಮುಗಿದನಂತರ ನರ್ತಕಿಯರು ನೃತ್ಯಮಾಡಿದರು. ರಾಜಕುಮಾರಿಗೆ ಆ ನೃತ್ಯ

ಮದುಮಗಳನ್ನಾಗಿ ಮಾಡಿ, ಆಕೆಗೆ ಸಮಸ್ತ ವಿಧವಾದ ಆಭರಣಗಳನ್ನು ತೊಡಿಸಿದರು. ಕೊಂಚಹೊತ್ತಿಗೆ ರಾಜನೂಸಹ ಬಂದನು. ಅವರೆಲ್ಲ ತನಗೆ ತೋರಿದಮರ್ಯಾದೆಗೆ ಅಲ್ಲಾ ದೀನನ ತಾಯಿ ಪರವಶಳಾಗಿ ಆನಂದಾಶ್ರು ಗಳನ್ನು ಸುರಿಸಿದಳು. ಅವರು ಮೂವರೂ ಮಾತನಾಡುತ್ತಿರಲು ಅಲ್ಲಿಗೆ ರಾಣಿ ಬಂದಳು.

ಆಕೆ ಅಲ್ಲಾದೀನನ ತಾಯಿಯನ್ನು ಮಾತ ನಾಡಿಸಲಿಲ್ಲ. ಅವರ ಸಂಭಾಷಣೆಯಲ್ಲಿ ಪ್ರವೇ ಶಿಸಲಿಲ್ಲ. ರಾಣಿಗೆ ಈ ಮದುವೆ ಕಿಂಚಿತ್ತಾ ದರೂ ಇಷ್ಟವಿರಲಿಲ್ಲ. ತನ್ನ ಅಳಿಯ ಅನಾ ಮಕನೆಂಬ ಅಂಶ ಆಕೆಯನ್ನು ಬಾಧಿಸುತಿತ್ತು. ಅಲ್ಲಾದೀನನ ವಿಷಯದಲ್ಲಿ ಆಕೆ ಮತ್ತು ಮಂತ್ರಿ ಒಂದಾದರು. ಆದರೆ ರಾಜನ

ದೇವಲೋಕದ ನೃತ್ಯದಂತೆ ತೋರಿತು. ಮಾರನೇಯದಿನ ಮುಂಜಾನೆ ಅಲ್ಲಾದೀನನು ಕುದುರೆಯನ್ನೇರಿ ರಾಜಭವನಕ್ಕೆ ಹೋಗಿ ತನ್ನ ಮನೆಯಲ್ಲಿ ನಡೆಯುವ ಭೋಜನಕೂಟಕ್ಕೆ ಬರಬೇಕೆಂದು ಮಾವನನ್ನು ಆಹ್ವಾನಿಸಿದನು. ರಾಜನು ಸಂತೋಷದಿಂದ ಆಹ್ವಾನವನ್ನು ಸ್ವೀಕರಿಸಿದನು. "ನನ್ನ ಮಗಳು ಹೇಗಿದ್ದಾಳೆ" ಎಂದು ಕೇಳಿದನು. ಅಲ್ಲಾದೀನನು ಉಚಿತರೀತಿಯಲ್ಲಿ ಆತನಿಗೆ ಸಮಾಧಾನ ಹೇಳಿದನು. ಇಬ್ಬರೂ ಒಟ್ಟಾಗಿ ಅಲ್ಲಾದೀನನ ಮನೆಗೆ ಬಂದರು.

ಭವನವನ್ನು ಹೊರಗಿನಿಂದ ನೋಡಿ ಮುಗ್ಧನಾಗಿದ್ದ ರಾಜನು ಒಳಗಿನ ವ್ಯವಸ್ಥೆಯನ್ನು ಕಂಡು ವಿಸ್ಮಯದಿಂದ ಮೂಕನಾದನು. ಆತನನ್ನು ಬುರುಜಿನಕೆಳಗಿದ್ದ ಪಡಸಾಲೆ ವಿಶೇಷವಾಗಿ ಆಕರ್ಷಿಸಿತು. ಅದನ್ನು ಪರಿಶೀಲಿಸಿ "ಪ್ರಪಂಚದಲ್ಲಿ ಎಲ್ಲೂ ಇಂತಹ ಕಟ್ಟಡ ಇನ್ನೊಂದು ಇರಲಾರದು, ಆದರೆ ಅಲ್ಲಾದೀನ್, ಒಂದು ಕಿಟಕಿಮಾತ್ರ ಅರೆಗೆಲಸ ಮಾಡಿ ನಿಲ್ಲಿಸಲಾಗಿದೆ, ಯಾಕೆ? ಉಳಿದ ಕಿಟಕಿಗಳೊಂದಿಗೆ ಹೋಲಿಸಿದರೆ ಕಳಾಹೀನವಾಗಿ ಕಾಣುವುದಿಲ್ಲವೇ?" ಎಂದ ರಾಜ.

"ಲೋಭಿತನದಿಂದಾಗಲೀ, ಅಶ್ರದ್ಧೆಯಿಂದಾಗಲೀ ಆ ಕಿಟಕಿಯ ಕೆಲಸ ಪೂರ್ತಿಮಾಡಲಿಲ್ಲವೆಂದು ಭಾವಿಸಬೇಡಿ. ಈ ಭವನ ಇಂದಿನಿಂದ ನಿಮ್ಮಮಗಳ ಮಂದಿರ. ಇದರ ನಿರ್ಮಾಣಕಾರ್ಯದಲ್ಲಿ ನಿಮಗೂ ಸ್ವಲ್ಪಭಾಗ




ವಿದ್ದರೆ ನಿಮ್ಮಕೀರ್ತಿ ದಶದಿಕ್ಕುಗಳಲ್ಲೂ ಹರಡುವುದು. ಅಂತಲೇ ಆ ಕಿಟಕಿಯನ್ನು ಅರ್ಧಕ್ಕೆ ನಿಲ್ಲಿಸಲಾಗಿದೆ. ಅದರ ಕೆಲಸ ತಾವು ಪೂರ್ತಿಗೊಳಿಸಬೇಕೆಂದು ಪ್ರಾರ್ಥನೆ" ಎಂದನು.

"ಭೇಷ್, ಉತ್ತಮಯೋಚನೆ, ಅಲ್ಲಾದೀನ್. ಆ ಕೆಲಸ ನನಗೆಬಿಡು" ಎಂದು ಹೇಳಿ ಭಟರನ್ನು ಕರೆದು "ಯಾರಲ್ಲಿ? ನಮ್ಮ ಶಿಲ್ಪಿಗಳನ್ನು ಕರೆಯಿರಿ" ಎಂದು ಆಜ್ಞಾಪಿಸಿದ ರಾಜ. ತರುವಾಯ ಆತನು ತನ್ನ ಮಗಳನ್ನು ನೋಡಲು ಅಂತಃಪುರಕ್ಕೆ ಹೋದನು. ಆಕೆಗೆ ನೂತನಬಾಳು ಆನಂದದಾಯಕವಾಗಿರುವುದೆಂದು ರಾಜನು ಗ್ರಹಿಸಿದನು. ನಂತರ ಆತನು ತನ್ನ ಮಗಳು ಮತ್ತು ಅಳಿಯನೊಂದಿಗೆ ಭೋಜನ ಸ್ವೀಕರಿಸಿದನು.

ಅಷ್ಟರಲ್ಲಿ ಶಿಲ್ಪಿಗಳು ಬಂದರು. ರಾಜನು ಅವರಿಗೆ ಕಿಟಕಿಯನ್ನು ತೋರಿಸಿ "ಇದನ್ನು ಸಹ ಇತರ ಕಿಟಕಿಗಳಂತೆ ಅಲಂಕರಿಸಿ" ಎಂದು ಆಜ್ಞಾಪಿಸಿದನು. "ಚಿತ್ತ ಮಹಾಪ್ರಭೂ" ಎಂದು ಅವರು ಉಳಿದ ಕಿಟಕಿಗಳನ್ನೆಲ್ಲಾ ಪರಿಶೀಲಿಸಿ, ಕಂಗಾಲಾಗಿ ರಾಜನಬಳಿಗೆ ಬಂದು "ಮನ್ನಿಸಬೇಕು ಮಹಾಪ್ರಭುಗಳು. ನಮ್ಮಬಳಿಯಿರುವ ರತ್ನಗಳನ್ನೆಲ್ಲಾ ತಂದು ಸುರಿದರೂ ಈ ಕಿಟಕಿಯ ನೂರನೇ ಒಂದು ಭಾಗವನ್ನಾದರೂ ಅಲಂಕರಿಸಲಾರೆವು" ಎಂದರು. ರಾಜನು ಭಟರನ್ನು ಕಳುಹಿಸಿ ಅಲ್ಲಾದೀನನು ತನಗೆ ಕಾಣಿಕೆಯಾಗಿ ಕಳುಹಿಸಿದ್ದ ರತ್ನಗಳನ್ನು ತರಿಸಿದನು. ಅವುಗಳನ್ನು ಆತನು ಶಿಲ್ಪಿಗಳಿಗೆ ತೋರಿಸಿ "ಇವುಗಳಲ್ಲಿ ಬೇಕಾದ ರತ್ನಗಳನ್ನು ಆರಿಸಿಕೊಂಡು ಉಳಿದುದನ್ನು ಖಜಾನೆಗೆ ಕಳುಹಿಸಿಬಿಡಿ" ಎಂದನು.

ಅವರು ಅಳತೆಮಾಡಿ, ಲೆಕ್ಕಹಾಕಿ "ಮಹಾಪ್ರಭೂ, ಇವುಗಳನ್ನೆಲ್ಲಾ ಸೇರಿಸಿದರೂ ಕಿಟಕಿಯ ಹತ್ತನೇ ಒಂದು ಭಾಗವನ್ನು ಮಾತ್ರವೇ ಅಲಂಕರಿಸಲು ಸಾಧ್ಯವಾಗುವುದು. ಅಷ್ಟೇ" ಎಂದು ಹೇಳಿದರು.

ರಾಜನು ತುಸು ಬೆದರಿದ. ತನ್ನ ಭಟರನ್ನು ಕರೆದು "ಮಂತ್ರಿ, ಸಾಮಂತರ ಬಳಿಯಿರುವ ರತ್ನಗಳನ್ನೆಲ್ಲಾ ತಕ್ಷಣ ತೆಗೆದುಕೊಂಡು ಬನ್ನಿ" ಎಂದ.

ಭಟರು ಹೋಗಿ ಕೊಂಚಹೊತ್ತಿಗೆ ಎಲ್ಲರ ಬಳಿಯಿದ್ದ ರತ್ನಗಳನ್ನು ಶೇಖರಿಸಿ ಮೂಟೆ ಕಟ್ಟಿಕೊಂಡು ಬಂದರು. ಶಿಲ್ಪಿಗಳು ಅವು



ಗಳನ್ನು ನೋಡಿ "ಮಹಾಪ್ರಭೂ, ಇವುಗಳನ್ನೆಲ್ಲಾ ಸೇರಿಸಿದರೂ ಕಿಟಕಿಯ ಅಲಂಕಾರ ಪೂರ್ತಿಯಾಗದು. ಸುಮಾರು ಎಂಟನೇ ಒಂದು ಭಾಗಕ್ಕೆ ಸರಿಹೋಗಬಹುದು. ಉಳಿದ ರತ್ನಗಳನ್ನು ತರಿಸಿಕೊಡಿ. ರತ್ನಗಳೆಲ್ಲ ಬಂದ ಕೂಡಲೇ ಕೆಲಸವನ್ನಾರಂಭಿಸಿ, ಮೂರು ವರ್ಷ ಎಡೆಬಿಡದೆ ಕೆಲಸಮಾಡಿ ಈ ಕಿಟಕಿಯನ್ನು ಸಹ ಉಳಿದ ಕಿಟಕಿಗಳಂತೆ ಮಾಡುತ್ತೇವೆ" ಎಂದರು.

ರಾಜನಿಗೆ ತಲೆ ಕತ್ತರಿಸಿ ಹಾಕಿದಂತಾಯಿತು. ತನ್ನ ಯೋಗ್ಯತೆಯನ್ನು ರಾಜನು ಗ್ರಹಿಸಿರಬೇಕೆಂದುಕೊಂಡು "ಮಹಾಪ್ರಭೂ, ಈ ಕಿಟಕಿಯನ್ನು ಕುರಿತು ನೀವು ಚಿಂತಿಸಬೇಡಿ. ನಾನು ಕೊಟ್ಟ ರತ್ನಗಳನ್ನು ಮತ್ತೆ ತೆಗೆದುಕೊಳ್ಳುವುದು ಉಚಿತವಾಗಿ ಕಾಣದು. ನಿಮ್ಮ ಪರವಾಗಿ ನಾನು ಆ ಕೆಲಸವನ್ನು ಪೂರ್ತಿಗೊಳಿಸುವೆನು" ಎಂದ ಅಲ್ಲಾದೀನ್.

ರಾಜನು ನಿಟ್ಟುಸಿರನ್ನು ಬಿಟ್ಟು ತನ್ನ ಮಗಳೊಂದಿಗೆ ಮಾತನಾಡಲು ಹೋದನು.

ಇಷ್ಟರಲ್ಲಿ ಅಲ್ಲಾದೀನ್ ದೀಪದ ಭೂತವನ್ನು ಆವಾಹನೆ ಮಾಡಿ "ಅರೆಗೆಲಸದಲ್ಲಿ ನಿಲ್ಲಿಸಿದ್ದ ಕಿಟಕಿ ಸಹ ಪೂರ್ತಿಯಾಗಲಿ" ಎಂದ. ಕೆಲವಾರು ಕ್ಷಣಗಳಲ್ಲೇ ಆ ಕಿಟಕಿ ಸಹ ರತ್ನಗಳಿಂದ ಥಳಥಳಿಸುತಿತ್ತು. ಸ್ವಲ್ಪ ಹೊತ್ತಿನ ತರುವಾಯ ರಾಜನು ಆ ಪಡಸಾಲೆಯಲ್ಲಿ ಅಡಿಯಿಟ್ಟು ಅರೆಗೆಲಸದಲ್ಲಿ ನಿಲ್ಲಿಸಿದ್ದ ಕಿಟಕಿಯನ್ನು ಗುರುತು ಹಿಡಿಯಲಶಕ್ತನಾದನು. ಆತನು ಸುತ್ತಲೂ ಅನೇಕ ಬಾರಿ ದೃಷ್ಟಿ



ಬೀರಿದ ನಂತರ ಅರ್ಧಂಬರ್ಧ ಮುಗಿದಿದ್ದ ಕಿಟಕಿ ಈಗ ಸಂಪೂರ್ಣವಾಗಿದೆಯೆಂದು ಅರಿತನು. ಆತನು ಅಲ್ಲಾದೀನನ ಕಡೆ ತಿರುಗಿ "ಅಲ್ಲಾದೀನ್, ನಿನ್ನ ಪ್ರತಿ ಕಾರ್ಯವೂ ನನ್ನನ್ನು ಆಶ್ಚರ್ಯಚಕಿತನನ್ನಾಗಿ ಮಾಡುತ್ತಿದೆ." ಎಂದ.

ರಾಜನು ತನ್ನ ಮಂತ್ರಿಯ ಕಡೆ ತಿರುಗಿ "ಈಗೇನು ಹೇಳುವೆ?" ಎಂದು ಗೆಲ್ಮೆಯಿಂದ ಹುಬ್ಬುಹಾರಿಸಿದನು.

"ಎಲ್ಲಾ ಈಶ್ವರೇಚ್ಛೆ" ಎಂದ ಮಂತ್ರಿ. ಅಲ್ಲಾದೀನನು ಮಾಂತ್ರಿಕನೆಂದೂ, ದುಷ್ಟ ಶಕ್ತಿಗಳನ್ನು ವಶಪಡಿಸಿಕೊಂಡಿರುವನೆಂದೂ ಮಂತ್ರಿಗೆ ಸಂಶಯವಿದ್ದೇ ಇತ್ತು.

ಅಂದಿನಿಂದ ರಾಜನು ಪ್ರತಿದಿನ ಸಾಯಂಕಾಲ ತನ್ನ ಮಗಳ ಮನೆಗೆ ಬಂದು ಅಳಿಯ ಮತ್ತು ಮಗಳೊಂದಿಗೆ ಸ್ವಲ್ಪಹೊತ್ತು ಕಳೆಯುವನು. ಅವರ ಮನೆಯನ್ನು ಪ್ರತಿದಿನ ನೋಡುತ್ತಿದ್ದರೂ ರಾಜನಿಗೆ ಅಲ್ಲಿ ಪ್ರತಿಸಲವೂ ಯಾವುದೋ ಒಂದು ಬಗೆಯ ಹೊಸತನ ಕಾಣಬರುತಿತ್ತು.

ತಾನು ಉನ್ನತಪದವಿಗೆ ಬಂದೆನೆಂದು ಅಲ್ಲಾದೀನನು ಗರ್ವಪಡಲಿಲ್ಲ. ಅವನು ತನ್ನ ಬಾಲ್ಯದ ಬಡತನವನ್ನು ಮರೆಯಲಿಲ್ಲ. ಅಂತಲೇ ಸದಾ ಬಡಬಗ್ಗರ ಸ್ಥಿತಿಗತಿಗಳಕಡೆ ಗಮನಕೊಡುತ್ತಿದ್ದನು.

ಅವನು ಬೀದಿಯಲ್ಲಿ ಹೊರಟಾಗ ಅವನ ಗುಲಾಮರು ಚಿನ್ನದ ನಾಣ್ಯಗಳನ್ನು ಎರಚುತ್ತಿದ್ದರು. ಅವನ ಮನೆಯಲ್ಲಿ ಪ್ರತಿದಿನ ಸುಮಾರು ಎರಡು ಸಾವಿರಜನರಿಗೆ ಅನ್ನದಾನ ನಡೆಯುತಿತ್ತು. ಅವನನ್ನು ಹೊಗಳದವರಿಲ್ಲ. ಉನ್ನತ ಪದವಿಯಲ್ಲಿದ್ದರೂ ಹೆಮ್ಮೆಪಡದ ಅಲ್ಲಾದೀನನನ್ನು ಕಂಡರೆ ಧನಿಕರಿಗೂ ಬಡವರಿಗೂ ತುಂಬಾ ಅಭಿಮಾನ.

ಅವನ ಹೆಂಡತಿಯ ವಿಷಯವಂತೂ ಹೇಳಬೇಕಾಗಿಲ್ಲ. ತನ್ನ ಪೂರ್ವಪುಣ್ಯದ ಫಲವಾಗಿಯೇ ತನಗೆ ಇಂಥ ಆದರ್ಶಪತಿ ಲಭಿಸಿದನೆಂದು ಆಕೆ ನಂಬಿದಳು. ಅಲ್ಲಾದೀನನು ತನ್ನ ಮಡದಿ ಮತ್ತು ಮಾತೆಯರೊಂದಿಗೆ ಅತ್ಯಂತ ಸುಖವಾಗಿ ಜೀವನ ಸಾಗಿಸುತ್ತಿದ್ದನು.

[ಇನ್ನೂ ಇದೆ]



# ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. 10

1958 ಜೂನ್ ಸಂಚಿಕೆಯಲ್ಲಿ ಪ್ರಕಟಿಸುವ ಫೋಟೋಗಳ ಮಾದರಿ :





ಮೇಲಿನ ಫೋಟೋಗಳಿಗೆ ಒಂದಕ್ಕೊಂದು ಸಂಬಂಧಿಸಿದಂತಿರುವ ಒಂದು ಜತೆ (ಎರಡು) ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲಿ ಬರೆದು ಈ ಕೆಳಗಿನ ವಿಳಾಸಕ್ಕೆ, ಏಪ್ರಿಲ್ 10 ನೇ ತಾರೀಕಿನೊಳಗೆ ನಮಗೆ ಬಂದು ತಲಪುವಂತೆ ಕಳಿಸತಕ್ಕದ್ದು. ನಂತರ ಬಂದವುಗಳನ್ನು ಗಮನಿಸುವುದಿಲ್ಲ.

ವಿಳಾಸ: **ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದ್ರಾಸು - 26.**

---

## ಈ ತಿಂಗಳ ಫೋಟೋ ಶೀರ್ಷಿಕೆಯ ಸ್ಪರ್ಧೆಯ ಫಲಿತ

ಮೊದಲನೇ ಫೋಟೋ: ನೆಲದಲ್ಲಿಯೂ ನೆಲದಡಿಯಲ್ಲಿಯೂ ನಾನಿದ್ದೇನೆ!

ಎರಡನೇ ಫೋಟೋ: ಭೂಮಿ, ಆಕಾಶ, ಪಾತಾಳದೊಳಗೆಲ್ಲಾ ನಾವಿದ್ದೇವೆ!!

ಕಳಿಸಿದವರು: ಪಿ. ನರಹರಿರಾವ್,

ಕೆನರಾ ಬ್ಯಾಂಕಿಂಗ್ ಕಾರ್ಪೊರೇಷನ್ ಲಿಮಿಟೆಡ್, ಮದರಾಸು - 1

**ಬಹುಮಾನ ರೂ. 10/- ಈ ತಿಂಗಳಿನಲ್ಲಿ ಕಳುಹಿಸಲ್ಪಡುತ್ತದೆ.**

# ಘಾತುಕಮೃಗಗಳು

ಒಂದು ಪ್ರಾಣಿ ಇನ್ನೊಂದು ಪ್ರಾಣಿಗೆ ಆಹಾರವಾಗಿಬಿಡುವುದು ಈ ಸೃಷ್ಟಿಯಲ್ಲಿ ಸರ್ವ ಸಾಧಾರಣವಾಗಿದೆ. ಜಿಂಕೆಗಳು ಗಿಡಗಳನ್ನು ತಿನ್ನುತ್ತವೆ. ಜಿಂಕೆಗಳನ್ನು ಹುಲಿ ಸಿಂಹಗಳು ತಿನ್ನುತ್ತವೆ. ಉತ್ತರ ಧ್ರುವದಲ್ಲಿಕೂಡ ಇದೇ ಆಹಾರಪರಂಪರೆಯಾಗಿದೆ. ಅಲ್ಲಿಯ ಚಿಗುರುಗಳನ್ನು ಕೀಟಕಾದಿಗಳು ತಿನ್ನುತ್ತವೆ. ಆ ಕೀಟಕಗಳನ್ನು ಹಿಮದಲ್ಲಿರುವ ಮೀನುಗಳು ತಿನ್ನುತ್ತವೆ. ಆ ಮೀನುಗಳನ್ನು ಹಿಮನರಿಗಳು ತಿನ್ನುತ್ತವೆ.

ಪ್ರತಿಯೊಂದು ಆಹಾರಪರಂಪರೆಗೂ ಒಂದು ಕೊನೆಯಲ್ಲಿ ವೃಕ್ಷಜಾತಿಗಳಿರುತ್ತವೆ. ಇನ್ನೊಂದು ಕೊನೆಯಲ್ಲಿ ಘಾತುಕಮೃಗಗಳಿರುತ್ತವೆ. ಆದರೆ ಯಾವಪ್ರಾಂತದಲ್ಲಿ ನೋಡಿದರೂ ಘಾತುಕಮೃಗಗಳ ಸಂಖ್ಯೆ ಪರಿಮಿತವಾಗಿಯೇ ಇರುತ್ತವೆ. ಅವುಗಳ ಸಂಖ್ಯೆ ಪರಿಮಿತಿಯನ್ನು ಮಿಂಚಿತೆಂದರೆ ಪ್ರಪಂಚದ ಆಹಾರದಲ್ಲಿ ಕೊರತೆಯುಂಟಾಗುತ್ತದೆ.

ಇದಕ್ಕೊಂದು ಉದಾಹರಣೆ ಕೊಡಬಹುದು. ಸಿಂಹಗಳು ಜಿಬ್ರಾಗಳನ್ನು ಕೊಂದು ತಿನ್ನುತ್ತವೆ. ಒಂದೊಂದು ಸಿಂಹವೂ ಬರಿಯ ಜಿಬ್ರಾಗಳನ್ನು ತಿಂದೇ ಬದುಕಬೇಕೆಂದರೆ



ವರ್ಷಕ್ಕೆ ೫೦ ಜಿಬ್ರಾಗಳು ಬೇಕು. ಆದರೆ ೫೦ ಜಿಬ್ರಾಗಳು ಬದುಕಲಿಕ್ಕೆ ತುಂಬಾ ಹಸಿರು ಹುಲ್ಲು ಅಗತ್ಯ. ಆಹಾರಪರಂಪರೆಯಲ್ಲಿ ಯಾವಾಗಲೂ ಒಂದು ಬಗೆಯ ಪ್ರಾಣಿಗಳನ್ನು ಹೊಂದಿಯೇ ಇನ್ನೊಂದು ಬಗೆಯ ಪ್ರಾಣಿಗಳ ಸಂಖ್ಯೆ ಆಧಾರಪಟ್ಟಿರುತ್ತದೆ.

ಘಾತುಕಮೃಗಗಳಲ್ಲಿ ಆನೇಕ ಜಾತಿಗಳಿವೆ. ಇವುಗಳಲ್ಲಿ ಪ್ರಸಿದ್ಧವಾದುವು ಬೆಕ್ಕಿನ ಜಾತಿ ಮತ್ತು ನಾಯಿಜಾತಿ. ಸಿಂಹ, ಹುಲಿ, ಚಿರತೆ ಮೊದಲಾದುವೆಲ್ಲಾ ಬೆಕ್ಕಿನ ಜಾತಿಯ ಘಾತುಕಮೃಗಗಳು.

ನರಿ, ಗುಳ್ಳೆನರಿ, ತೋಳ, ಕೊಯೋಟ್ ಮೊದಲಾದುವು ನಾಯಿಜಾತಿಗೆ ಸೇರಿದುವು.

ಜಲಚರಗಳಲ್ಲಿಕೂಡಾ ಘಾತುಕಮೃಗಗಳಿವೆ. ವಾಲ್ರಸ್, ಸೀಲ್, ಸೀ ಲಯನ್ ಮೊದಲಾದುವು ಮಾಂಸಾಹಾರಿಗಳು.

ಸಿವಂಗಿಕೂಡಾ ಮಾಂಸಾಹಾರಿಯೆ. ಆದರೆ ಅದು ಪ್ರಾಣಿಗಳನ್ನು ತಾನೇ ಕೊಂದು ತಿನ್ನುವುದಿಲ್ಲ. ಅದು ಇತರ ಮಾಂಸಾಹಾರಿಗಳು ಕೊಂದು ತಿಂದ ಎಂಜಲು ಮಾಂಸಗಳನ್ನು ತಿಂದು ಅರಣ್ಯವನ್ನು ಶುಭ್ರಮಾಡುತ್ತದೆ.

ಇನ್ನೂ ಈ ಪ್ರಪಂಚದಲ್ಲ ಅನೇಕ ಪ್ರಾಂತಗಳಲ್ಲಿ ಅನೇಕ ಬಗೆಯ ಘಾತುಕ ಮೃಗಗಳಿರುತ್ತವೆ.



# ಅ ವಿ ವೇ ಕ

ಕೇರಳದೇಶದಲ್ಲಿ ಪ್ರಸೇನನೆಂಬ ರಾಜನಿದ್ದ. ಅವನಿಗೊಂದು ಕಠಿನಕಾಯಿಲೆ ಬಂತು. "ಮಹಾರಾಜ, ನೀವು ನೆತ್ತಿಯಲ್ಲಿ ಚಕೋರಪಕ್ಷಿಯನ್ನಿಟ್ಟುಕೊಂಡು ಸ್ನಾನಮಾಡಿದ ಹೊರತು ಈ ವ್ಯಾಧಿ ಗುಣವಾಗುವುದಿಲ್ಲ" ಎಂದರು ರಾಜವೈದ್ಯರು.

ರಾಜನು ಬೇಡರನ್ನು ಕರೆದು "ನೀವು ಹೇಗಾದರೂ ಒಂದು ಚಕೋರಪಕ್ಷಿಯನ್ನು ತಂದರೆ ನಿಮಗೆ ಒಳ್ಳೆಯ ಇನಾಮು ಕೊಡುತ್ತೇನೆ" ಎಂದ.

ಬೇಡರು ಅಡವಿಯಲ್ಲಿ ಬಲೆ ಹಾಕಿದರು. ಅದರಲ್ಲೊಂದು ಕೊಕ್ಕರೆ ಸಿಕ್ಕಿಕೊಂಡಿತು. ಆ ಕೊಕ್ಕರೆಯನ್ನು ಬಿಡಿಸಲಿಕ್ಕೆ ಹೋಗಿ ಒಂದು ಚಕೋರಪಕ್ಕಿ ಸಿಕ್ಕಿಕೊಂಡಿತು. "ನನ್ನನ್ನುಬಿಟ್ಟರೆ ನಿಮಗೆ ದೊಡ್ಡ ನಿಧಿ ತೋರಿಸುತ್ತೇನೆ" ಎಂದು ಚಕೋರಪಕ್ಷಿ ಹೇಳಿತು. ಅದರ ಮಾತು ಕೇಳದೆ ಬೇಡರು ಅದನ್ನೊಯ್ದು ರಾಜನಿಗಿತ್ತರು. ರಾಜವೈದ್ಯರು ಆ ಪಕ್ಷಿಯನ್ನು ರಾಜನ ತಲೆಯಲ್ಲಿಟ್ಟು ಸ್ನಾನಮಾಡಿಸಿದರು. ರೋಗ ಗುಣವಾಯಿತು. ರಾಜನು ಪಕ್ಷಿಯನ್ನು ಸಂತೋಷದಿಂದ ಬಿಟ್ಟುಬಿಟ್ಟ.

ಪಕ್ಷಿ ಆಕಾಶಕ್ಕೆ ಹಾರಿ—"ರಾಜಾ, ಕೊಕ್ಕರೆಯನ್ನು ಬಿಡಿಸಲು ಹೋಗಿ ಬಲೆಯಲ್ಲಿ ಸಿಕ್ಕಿಬಿದ್ದ ನಾನೊಂದು ಅವಿವೇಕಿ; ನಾನು ತೋರಿಸುವ ನಿಧಿಯನ್ನು ಕಳೆದುಕೊಂಡ ನಿನ್ನ ಬೇಡರೂ ಅವಿವೇಕಿಗಳು; ಎಲ್ಲರಿಗಿಂತ ದೊಡ್ಡ ಅವಿವೇಕಿ ನೀನು. ನನ್ನ ನೀರು ತಗಲಿದ ಮಾತ್ರಕ್ಕೇ ಕಠಿನವ್ಯಾಧಿ ಗುಣವಾದಾಗ ನನ್ನ ಮಾಂಸವನ್ನು ತಿಂದರೆ ಎಷ್ಟು ಒಳ್ಳೆಯದಾಗುತ್ತಿತ್ತೆಂದು ನಿನಗೆ ತೋರಲೇ ಇಲ್ಲ! ಶುದ್ಧ ಅವಿವೇಕಿ!" ಎಂದು ಹೇಳಿ ಹಾರಿಹೋಯಿತು!



# ಚಿ ತ್ರ ಕ ಥೆ





ಒಂದುದಿನ ವಾಸು ಮತ್ತು ಗೋಪಿ ಫುಟ್‌ಬಾಲ್ ಆಡುತಿದ್ದರು. ಸ್ವಲ್ಪದೂರದಲ್ಲಿ 'ಟೈಗರ್' ನಿಂತಿತ್ತು. ಆಗೊಬ್ಬ ಪೋಕರಿ ಹುಡುಗ ದೊಡ್ಡನಾಯಿಯೊಂದನ್ನು ಟೈಗರ್‌ನಮೇಲೆ 'ಛೂ' ಬಿಟ್ಟ. ಟೈಗರ್ ತಪ್ಪಿಸಿಕೊಂಡು ಆಚೆಗೆ ಓಡಿತು. ವಾಸು ಹೊಡೆದ ಚೆಂಡು ಆ ದೊಡ್ಡನಾಯಿಗೆ ಬಡಿಯಿತು. ಕೂಡಲೇ ಅದು ನೋವಿನಿಂದ 'ಕುಂಯ್ಯೋ' ಎಂದು ಊಳಿಡುತ್ತಾ ಓಡಿತು. ಟೈಗರ್ ಧೈರ್ಯದಿಂದ ಆ ಪೋಕರಿ ಹುಡುಗನನ್ನು ಓಡಿಸಿಕೊಂಡುಹೋಯಿತು. ಆತ ಬಿದ್ದೆನೋ ಎದ್ದೆನೋ ಎಂದು ಓಡುವಾಗ ಅದನ್ನು ನೋಡಿ ವಾಸು ಗೋಪಿಯರು ಹೊಟ್ಟೆ ತುಂಬಾ ನಕ್ಕರು.






Printed by B. NAGI REDDI at the B. N. K. Press (Private) Ltd., and Published by him for Chandamama Publications, from Madras 26—Controlling Editor: SRI 'CHAKRAPANI'

# ಅಶೋಕಾ ಫ್ಲವರ್ ಆಫ್ ಹೆವೆನ್ ಟಾಲ್ಕಂ




## ಪೌಡರ್ ಅಂಡ್ ಸ್ನೋ

ಗಗನ ಕುಸುಮದಂತಹ ಈ ಅಪೂರ್ವ ಸೌಂದರ್ಯ ಸಾಧನಗಳು ವಿಜಯ ಕೆಮಿಕಲ್ಸ್ ರವರ ದೀರ್ಘ ಸಂಶೋಧನೆಯ ಫಲವಾಗಿ ನಿಮಗೆ ಲಭಿಸುತ್ತವೆ. ನವೀನವಾದ ರಾಸಾಯನಿಕಗಳಿಂದ ಪರಿಮಳ ದ್ರವ್ಯಗಳಿಂದ ಅತ್ಯುತ್ತಮವಾಗಿ ತಯಾರಾದುವು. ಇವುಗಳ ಉಪಯೋಗದಿಂದ ನಿಮ್ಮ ಸೌಂದರ್ಯವು, ಮುಖವರ್ಚಸ್ಸು ಇಮ್ಮಡಿಯಾಗುತ್ತದೆ. ಉಪಯೋಗಿಸಿದ ಸ್ವಲ್ಪ ಕಾಲದಲ್ಲೇ ಇವುಗಳ ಗುಣಗಳನ್ನು ನೀವು ಗ್ರಹಿಸಬಲ್ಲಿರಿ. ಇಂದೇ ಉಪಯೋಗಿಸಿರಿ.

**ವಿಜಯಾ ಕೆಮಿಕಲ್ಸ್,**
**ಮದರಾಸು - 7.**

ಏಜೆಂಟರು: ಗುಡ್‌ವಿಲ್ ಏಜನ್ಸೀಸ್, ಬೆಜವಾಡ.

---

# ಅದ್ವಿತೀಯವಾದ ತರಹೆ! ಅತಿಸುಲಭವಾದ ಬೆಲೆ!!







# ಐರಿಸ್ ಶಾಯಿಗಳು

ಫೌಂಟೆನ್ ಪೇನಾಗಳಿಗೆ ಹೆಸರು ಪಡೆದುವು

1, 2, 4, 12, 24 ಔನ್ಸುಗಳ ಪ್ಯಾಕಿಂಗುಗಳಾಗಿ ದೊರೆಯುತ್ತವೆ

ತಯಾರಿಸುವವರು :

**ರಿಸರ್ಚ ಕೆಮಿಕಲ್ ಲೇಬೊರೇಟರೀಸ್**

ಮದ್ರಾಸು - 4 ★ ನ್ಯೂಢಿಲ್ಲಿ - 1 ★ ಬೆಂಗಳೂರು - 3



ಕಳಾತ್ಮಕವಾದ ಶುದ್ಧವಾದ ಕೆಲಸ, ಮನೋಹರ
ವಾದ ಮುದ್ರಣ ಮತ್ತು ಹೇಳಿದ ಅವಧಿಗೆ ಒಪ್ಪಿ
ಸುವುದು ಇವು ಪ್ರತಿ ವ್ಯಕ್ತಿಗಳಿಗೂ, ವರ್ತಕರಿಗೂ
ನಾವು ಕೊಡಬಲ್ಲ ಗ್ಯಾರಂಟೀ.

★

ಇಂಗ್ಲೀಷು, ಹಿಂದೀ, ತೆಲುಗು, ತಮಿಳು, ಕನ್ನಡ,
ಮರಾಠೀ, ಗುಜರಾತೀ, ಮಲೆಯಾಳ, ಒರಿಯಾ
ಈ ಒಂಬತ್ತು ಭಾಷೆಗಳಲ್ಲಿ ಮುದ್ರಣಕೆಲಸವನ್ನು
ಮಾಡಬಲ್ಲೆವು.

★

ದಿ

**ಬಿ. ಎನ್. ಕೆ. ಪ್ರೆಸ್ (ಪ್ರೈವೇಟ್) ಲಿ.**

ಚಂದಮಾಮ ಬಿಲ್ಡಿಂಗ್ಸ್ :: ಮದರಾಸು-26.

ಫೋನ್: 88851-3 ಲೈನುಗಳು

ನಮ್ಮ ಕಾರ್ಯ
ಕುಶಲತೆಯನ್ನು
ದೊಡ್ಡದಾಗಿ
ಹೇಳಿಕೊಳ್ಳುವುದಲ್ಲ

ಅತ್ಯುತ್ತಮ ವಾಗಿ

ಮಾಡಿಯೇ ತೋರಿಸುತ್ತೇವೆ

★

ಪೋಸ್ಟರ್ಸ್
ಕ್ಯಾಲೆಂಡರ್ಸ್
ಕಾರ್ಟನ್ಸ್
ಲೇಬಿಲ್ಸ್
ಬುಕ್ಲೆಟ್ಸ್
ಫೋಲ್ಡರ್ಸ್

ಆಫ್ ಸೆಟ್ ಪ್ರಿಂಟಿಂಗಿನಲ್ಲಿ ಏನು ಬೇಕಾದರೂ ಸರಿ

ಮೇಲ್ತರದ ಮುದ್ರಣಕ್ಕೆ ಗುರ್ತು




## ಪ್ರಸಾದ್ ಪ್ರೋಸೆಸ್ (ಪ್ರೈವೇಟ್) ಲಿ. ಮದರಾಸು - 26

ಪ್ರತಿನಿಧಿ ಕಾರ್ಯಾಲಯಗಳು :

**ಬೊಂಬಾಯಿ - 1: ಲೋಟಸ್ ಹೌಸ್ ಮೇರೀನ್ ಲೈನ್ಸ್,** (ಫೋನ್ : 241162)
**ಬೆಂಗಳೂರು : ಡಿ/11, 5 ಮೆಯಿನ್ ರೋಡ್, ಗಾಂಧಿನಗರ್,** (ಫೋನ್ : 6206)

Photo by D. S. Kasbeker



ಬಹುಮಾನ
ಪಡೆದ ಶೀರ್ಷಿಕೆ

ಭೂಮಿ, ಆಕಾಶ, ಪಾತಾಳದೊಳಗೆಲ್ಲಾ
ನಾನಿದ್ದೇನೆ!!

ಕಳಿಸಿದವರು:
ಪಿ. ನರಹರಿರಾವ್

CHANDAMAMA (Kannada) APRIL 1958 Regd. No. M. 5210




ರೂಪಧರನ ಯಾತ್ರೆಗಳು - ೯